# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಆಗಸ್ಟ್ ೨೮, ೨೦೧೪ (ಭಾದ್ರಪದ ೬, ಶಕ ವರ್ಷ ೧೯೩೬)<br>Bangalore, Thursday, August 28, 2014 (Bhadrapada 6, Shaka Varsha 1936) | ಸಂಚಿಕೆ ೩೫<br>Issue 35 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರ್ಥಿಕ ಸಚಿವಾಲಯ

**ವಿಷಯ:** ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ಸಂಖ್ಯೆಯನ್ನು ನೀಡಿರುವ ಪ್ರಕರಣಗಳಲ್ಲಿ ಬಾಕಿ ಚಂದಾ ವಂತಿಗೆ ವಸೂಲಾತಿ ಮಾಡುವ ಬಗ್ಗೆ.

**ಓದಲಾಗಿದೆ:**
1) ಅಧಿಸೂಚನೆ ಸಂಖ್ಯೆ:ಆಇ 48 ಮುಭನಿ 2001, ದಿನಾಂಕ:08.03.2002.
2) ಹಿರಿಯ ಉಪ ಮಹಾಲೇಖಪಾಲರು (ಫಂಡ್ಸ್)ರವರ ಪತ್ರ ಸಂಖ್ಯೆ:FM(C)/G1/2013-14 /103, ದಿನಾಂಕ:04.09.2013.
3) ಸರ್ಕಾರದ ಸುತ್ತೋಲೆ ಸಂಖ್ಯೆ:ಆಇ 26 ಮುಭನಿ 2013, ದಿನಾಂಕ: 30.09.2013.
4) ಅಧಿಸೂಚನೆ ಸಂಖ್ಯೆ: ಆಇ 14 ಮುಭನಿ 2012, ದಿನಾಂಕ:23.05.2014.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳಿಗೆ ತಿದ್ದುಪಡಿ ತಂದು ರಾಜ್ಯ ಸರ್ಕಾರದ ಸೇವೆಗೆ ಸೇರಿದ ನೌಕರರು ದಿನಾಂಕ:01.06.2002 ರಿಂದ ಜಾರಿಗೆ ಬರುವಂತೆ ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮ 5ರಡಿ ನಿಧಿಗೆ ವಂತಿಕೆ ನೀಡುವುದು ಕಡ್ಡಾಯ ಮಾಡಲಾಗಿದೆ. ಸಾಮಾನ್ಯ ಭವಿಷ್ಯ ನಿಧಿಗೆ ಪ್ರವೇಶ ಪಡೆಯಲು ಸಲ್ಲಿಸಬೇಕಾದ ನಮೂನೆ ಸಂಖ್ಯೆ–1ರ ಸೂಚನೆಗಳು ಭಾಗದ ಸೂಚನೆ ಸಂಖ್ಯೆ–5ರಲ್ಲಿ ಸಾಮಾನ್ಯ ಭವಿಷ್ಯ ನಿಧಿಗೆ ವಂತಿಕೆಯು ಮಹಾಲೇಖಪಾಲರಿಂದ ಖಾತೆ ಸಂಖ್ಯೆ ಹಂಚಿಕೆಯಾದ ನಂತರ ಪ್ರಾರಂಭಗೊಳ್ಳತಕ್ಕದ್ದು ಎಂದು ತಿಳಿಸಲಾಗಿದೆ. ಅಂದರೆ ನಿಯಮ 5ನ್ನು ನಮೂನೆ–1 ರಲ್ಲಿನ 5ನೇ ಸೂಚನೆಯ ಜೊತೆಗೆ ಓದಿಕೊಂಡಾಗ, ದಿನಾಂಕ:31.03.2006ಕ್ಕೂ ಹಿಂದೆ ಸರ್ಕಾರಿ ಸೇವೆಗೆ ಸರ್ಕಾರಿ ನೌಕರರುಗಳಿಂದ ಮಾಸಿಕ ವಂತಿಗೆಯು ಮಹಾಲೇಖಪಾಲರಿಂದ ಖಾತೆ ಸಂಖ್ಯೆ ಹಂಚಿಕೆಯಾದ ನಂತರ ಪ್ರಾರಂಭಗೊಳ್ಳಬೇಕಿದೆ. ಸರ್ಕಾರಿ ನೌಕರನು ನಿಯಮ 4(5)ರ ಮೇರೆಗೆ ನಿಧಿಗೆ ಸೇರಲು ಅಗತ್ಯಪಡಿಸಲಾದ ದಿನಾಂಕದಿಂದ ಚಂದಾ ಸಲ್ಲಿಸಲು ತಪ್ಪಿದಲ್ಲಿ, ಚಂದಾ ಹಣದ ಬಾಕಿಯ ಕಾರಣದಿಂದ ನಿಧಿಗೆ ಬಾಕಿ ಇರುವ ಒಟ್ಟು ಮೊತ್ತವನ್ನು ಬಡ್ಡಿ ಸಮೇತ ವಸೂಲು ಮಾಡಲು ನಿಯಮ 13(3)ರಲ್ಲಿ ಅವಕಾಶ ಕಲ್ಪಿಸಲಾಗಿದೆ. ನಿಯಮ 5 ರಡಿಯಲ್ಲಿ ಚಂದಾದಾರರಾಗುವುದು ಕಡ್ಡಾಯಗೊಳಿಸಲಾದ ಪ್ರಕರಣಗಳಿಗೂ ನಿಯಮ 13(3) ಅನ್ವಯವಾಗುವುದೆಂದು ಪರಿಗಣಿಸಿದಲ್ಲಿ ಇಲ್ಲಿಯವರೆಗೆ ಚಂದಾದಾರರಗದಿರುವ ಸರ್ಕಾರಿ ನೌಕರರಿಂದ ದಿನಾಂಕ:01.06.2002 ರಿಂದ ಬಾಕಿ ಚಂದಾಗಳನ್ನು ಬಡ್ಡಿಯೊಂದಿಗೆ ವಸೂಲು ಮಾಡಬೇಕಾಗುತ್ತದೆ. ಈ ರೀತಿ ಪೂರ್ವಾನ್ವಯ ದಿನಾಂಕದಿಂದ ಚಂದಾ ಮೊತ್ತವನ್ನು ಬಡ್ಡಿ ಸಮೇತ ವಸೂಲು ಮಾಡಿದಲ್ಲಿ ಸಂಬಂಧಪಟ್ಟ ಚಂದಾದಾರನಿಗೆ ಆರ್ಥಿಕ ಹೊರೆ ಉಂಟಾಗುವುದೆಂದು ಸರ್ಕಾರ ಮನಗಂಡಿದೆ.

ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳನ್ವಯ ರಾಜ್ಯ ಸರ್ಕಾರದ ಸೇವೆಗೆ ಸೇರಿದ ನೌಕರರು ಚಂದಾದಾರರಾಗುವುದು ಕಡ್ಡಾಯಗೊಳಿಸಲಾಗಿರುವುದರಿಂದ, ಮಹಾಲೇಖಪಾಲರ ಕಛೇರಿಯಲ್ಲಿ ಸೆಪ್ಟೆಂಬರ್ 2012ರ ಅಂತ್ಯದವರೆಗೆ ಒಟ್ಟು ಸುಮಾರು 1,800 ಪ್ರಕರಣಗಳಲ್ಲಿ ಸಾಮಾನ್ಯ ಭವಿಷ್ಯ ನಿಧಿ ಖಾತೆ ಸಂಖ್ಯೆಯನ್ನು ನೀಡಲಾಗಿದ್ದರೂ ಸಹ ಈ ಪ್ರಕರಣಗಳಲ್ಲಿ ದಿನಾಂಕ: 01.06.2002ರಿಂದಲೇ ಚಂದಾ ಮೊತ್ತವನ್ನು ಸಂಬಂಧಪಟ್ಟ ಚಂದಾದಾರರಿಂದ ವಸೂಲು ಮಾಡಬೇಕಾಗಿರುವುದರಿಂದ ಈ ಅರ್ಜಿಗಳು ಬಾಕಿ ಉಳಿದಿದ್ದು, ಬಾಕಿ ಮೊತ್ತ ವಸೂಲಾತಿ ಬಗ್ಗೆ ಸರ್ಕಾರದ ಹಂತದಲ್ಲಿ ಸೂಕ್ತ ನಿರ್ಣಯವನ್ನು ಕೈಗೊಳ್ಳುವಂತೆ ಕೋರಿ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಪತ್ರದಲ್ಲಿ ಮಹಾಲೇಖಪಾಲರು ಕೋರಿರುತ್ತಾರೆ.

ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ಸುತ್ತೋಲೆಯಲ್ಲಿ ದಿನಾಂಕ:31.03.2006ಕ್ಕಿಂತಲೂ ಹಿಂದೆ ಸರ್ಕಾರಿ ಸೇವೆಗೆ ಸೇರಿದ ಎಲ್ಲಾ ಅಧಿಕಾರಿ/ಸಿಬ್ಬಂದಿಗಳು ಸಾಮಾನ್ಯ ಭವಿಷ್ಯ ನಿಧಿಗೆ ಚಂದಾದಾರರಾಗದಿದ್ದಲ್ಲಿ ಸೆಪ್ಟೆಂಬರ್ 2013ರೊಳಗೆ ಸಂಬಂಧಪಟ್ಟವರಿಂದ ನಿಗದಿತ ಅರ್ಜಿಯನ್ನು ಪಡೆದು ಮಹಾಲೇಖಪಾಲರಿಗೆ ಕಳುಹಿಸಿಕೊಡತಕ್ಕದ್ದು, ತಪ್ಪಿದ್ದಲ್ಲಿ ಸಂಬಂಧಪಟ್ಟ ಡಿಡಿಓ ಗಳನ್ನು ಹೊಣೆಗಾರರನ್ನಾಗಿ ಮಾಡಲಾಗುವುದೆಂದು ತಿಳಿಸಲಾಗಿದೆ.

ಮೇಲೆ ಕ್ರ.ಸಂ. (4)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ದಿನಾಂಕ:01.04.2014ರಿಂದ ಜಾರಿಗೆ ಬರುವಂತೆ ನಿಯಮ 11ಕ್ಕೆ ತಿದ್ದುಪಡಿ ತಂದು ವಂತಿಗೆದಾರನು ಸಂದಾಯ ಮಾಡಬೇಕಾದ ಮಾಸಿಕ ವಂತಿಗೆಯ ಕನಿಷ್ಠ ದರವನ್ನು ಕೋಷ್ಟಕದಲ್ಲಿ ನಿಗದಿಗೊಳಿಸಲಾಗಿದೆ. ಈ ಕೋಷ್ಟಕವನ್ನು ಆದೇಶದ ಅನುಬಂಧದಲ್ಲಿ ಇರಿಸಲಾಗಿದೆ.

ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು 1957ರ ಯಾವುದಾದರೊಂದು ನಿಯಮವನ್ನು ಜಾರಿಗೊಳಿಸುವುದರಿಂದ ಚಂದಾದಾರನಿಗೆ ಅನಗತ್ಯ ತೊಂದರೆ ಉಂಟಾಗುತ್ತದೆಂದು ಮನದಟ್ಟಾದರೆ ಸರ್ಕಾರ ಅಂತಹ ಸಂಬಂಧಪಟ್ಟ ನಿಯಮವನ್ನು ಸಡಿಲಿಸಲು ನಿಯಮ 31ರಲ್ಲಿ ಅವಕಾಶ ಕಲ್ಪಿಸಲಾಗಿದೆ.

ಆದುದರಿಂದ, ದಿನಾಂಕ:31.03.2006ಕ್ಕೂ ಹಿಂದೆ ರಾಜ್ಯ ಸರ್ಕಾರದ ಸೇವೆಗೆ ಸೇರಿದ ನೌಕರರು ಸಾಮಾನ್ಯ ಭವಿಷ್ಯ ನಿಧಿಗೆ ಸೇರ್ಪಡೆಗೊಳ್ಳಲು ಅರ್ಜಿ ಸಲ್ಲಿಸಿದ ಪ್ರಕರಣಗಳಲ್ಲಿ ಹಾಗೂ ಇಲ್ಲಿಯವರೆಗೆ ಚಂದಾದಾರರಾಗದಿರುವ ಸರ್ಕಾರಿ ನೌಕರರಿಂದ ಈ ಆದೇಶದ ಅನುಬಂಧದಲ್ಲಿನ ಕೋಷ್ಟಕದಂತೆ ದಿನಾಂಕ:01.04.2014ರಿಂದ ಭವಿಷ್ಯವರ್ತಿಯಾಗಿ ನಿಯಮಾನುಸಾರ ಚಂದಾ ವಸೂಲು ಮಾಡುವುದು ಸೂಕ್ತವೆಂದು ಹಾಗೂ ಈ ಹಿಂದೆ ಚಂದಾದರರು ಸರಾಸರಿ ವೇತನದ ಶೇ.4ಕ್ಕಿಂತ ಕಡಿಮೆ ವಂತಿಗೆಯನ್ನು ಪಾವತಿಸಿದ್ದರೂ ಸಹ ಅದು ಸಕ್ರಮವೆಂದು ಪರಿಗಣಿಸಿ ಬಾಕಿ ವಂತಿಗೆಯನ್ನು ವಸೂಲು ಮಾಡುವ ಅವಶ್ಯಕತೆ ಇಲ್ಲವೆಂದು ಸರ್ಕಾರ ನಿರ್ಣಯಿಸಿ ಈ ಮುಂದಿನಂತೆ ಆದೇಶಿಸಿದಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 26 ಮುಭನಿ 2013, ಬೆಂಗಳೂರು, ದಿನಾಂಕ : 06.06.2014.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು 1957ರ ನಿಯಮ 31ರಡಿಯಲ್ಲಿ ಪ್ರದತ್ತವಾದ ಅಧಿಕಾರದನ್ವಯ ದಿನಾಂಕ: 31.03.2006ಕ್ಕೂ ಹಿಂದೆ ರಾಜ್ಯ ಸರ್ಕಾರದ ಸೇವೆಗೆ ಸೇರಿದ ಅಧಿಕಾರಿ/ನೌಕರರು ಸಾಮಾನ್ಯ ಭವಿಷ್ಯ ನಿಧಿಗೆ ಸೇರ್ಪಡೆಗೊಳ್ಳಲು ಅರ್ಜಿ ಸಲ್ಲಿಸಿದ ಪ್ರಕರಣಗಳಲ್ಲಿ ಹಾಗೂ ಇಲ್ಲಿಯವರೆಗೆ ಚಂದಾದಾರರಾಗದಿರುವ ಸರ್ಕಾರಿ ನೌಕರರಿಂದ ಈ ಆದೇಶದ ಅನುಬಂಧದಲ್ಲಿನ ಕೋಷ್ಟಕದಂತೆ ದಿನಾಂಕ:01.04.2014ರಿಂದ ಭವಿಷ್ಯವರ್ತಿಯಾಗಿ ನಿಯಮಾನುಸಾರ ಮಾಸಿಕ ಚಂದಾ ವಸೂಲು ಮಾಡಲು ಸರ್ಕಾರ ಆದೇಶಿಸಿದೆ.

ಈ ಹಿಂದೆ ಚಂದಾದಾರರು ಸರಾಸರಿ ವೇತನದ ಶೇ.4ಕ್ಕಿಂತ ಕಡಿಮೆ ವಂತಿಗೆಯನ್ನು ಪಾವತಿಸಿದ್ದರೂ ಸಹ ಅಂತಹ ಪ್ರಕರಣಗಳಲ್ಲಿ ದಿನಾಂಕ:31.03.2014ರವರೆಗೆ ಬಾಕಿ ಉಳಿದಿರುವ ಕನಿಷ್ಠ ವಂತಿಗೆಯನ್ನು ವಸೂಲು ಮಾಡುವ ಅವಶ್ಯಕತೆ ಇರುವುದಿಲ್ಲ.

ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು 1957ಕ್ಕೆ ಅವಶ್ಯ ತಿದ್ದುಪಡಿ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

**ಅನುಬಂಧ**

ಅಧಿಸೂಚನೆ ಸಂಖ್ಯೆ:ಆಇ 14 ಮುಭನಿ 2012, ದಿನಾಂಕ:23.05.2014ರನ್ವಯ ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು, 1957ರ ನಿಯಮ 11ರ ಉಪನಿಯಮ (1)ಕ್ಕೆ ಈ ತಿದ್ದುಪಡಿಯನ್ನು ಮಾಡಲಾಗಿದ್ದು, ದಿನಾಂಕ: 01.04.2014ರಿಂದ ಜಾರಿಗೆ ಬರುವಂತೆ ವಂತಿಗೆದಾರನು ಸಂದಾಯ ಮಾಡಬೇಕಾಗಿರುವ ಮಾಸಿಕ ವಂತಿಗೆಯ ಕನಿಷ್ಠ ದರವನ್ನು ವೇತನ ಶ್ರೇಣಿಯ ಸರಾಸರಿ ವೇತನದ ಶೇಕಡಾ ನಾಲ್ಕಕ್ಕೆ ಸಮನಾಗುವಂತೆ ನಿರ್ಧಿಷ್ಟಪಡಿಸಿ ಈ ಕೆಳಕಂಡ ಕೋಷ್ಟಕವನ್ನು ಸಿದ್ಧಪಡಿಸಲಾಗಿದೆ.

**ಕೋಷ್ಟಕ**

| ಕ್ರಮ ಸಂಖ್ಯೆ | ವೇತನ ಶ್ರೇಣಿ | ಮಾಸಿಕ ವಂತಿಗೆಯ ಕನಿಷ್ಠ ಮೊತ್ತ (ರೂ.ಗಳಲ್ಲಿ) |
|---|---|---|
| 1. | 9600–14550 | 480 |
| 2. | 10400–16400 | 540 |
| 3. | 11000–19000 | 600 |
| 4. | 11600–21000 | 650 |
| 5. | 12500–24000 | 730 |
| 6. | 13600–26000 | 790 |
| 7. | 14550–26700 | 820 |
| 8. | 16000–29600 | 910 |
| 9. | 17650–32000 | 990 |
| 10. | 19000–34500 | 1070 |
| 11. | 20000–36300 | 1130 |
| 12. | 21600–40050 | 1230 |
| 13. | 22800–43200 | 1320 |
| 14. | 24000–45300 | 1390 |
| 15. | 26000–47700 | 1470 |

| ಕ್ರಮ ಸಂಖ್ಯೆ | ವೇತನ ಶ್ರೇಣಿ | ಮಾಸಿಕ ವಂತಿಗೆಯ ಕನಿಷ್ಠ ಮೊತ್ತ (ರೂ.ಗಳಲ್ಲಿ) |
|---|---|---|
| 16. | 28100–50100 | 1560 |
| 17. | 30400–51300 | 1630 |
| 18. | 32800–52500 | 1710 |
| 19. | 36300–53850 | 1800 |
| 20. | 38100–55200 | 1870 |
| 21. | 40050–56550 | 1930 |
| 22. | 44250–60600 | 2100 |
| 23. | 48900–63600 | 2250 |
| 24. | 52500–73000 | 2510 |
| 25. | 56550–79800 | 2730 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

**PR. 513**
**SC. 100**

## ಒಳಾಡಳಿತ ಸಚಿವಾಲಯ

**ವಿಷಯ:** ಗುಲ್ಬರ್ಗಾ ಕೇಂದ್ರ ಕಾರಾಗೃಹಕ್ಕೆ ಸಲಹಾ ಮಂಡಳಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರವರ ಪತ್ರ ಸಂಖ್ಯೆ: ಜೆ2/ಸಿಆರ್–63/2014 ದಿನಾಂಕ: 14.02.2014.

**ಪ್ರಸ್ತಾವನೆ:**

ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 1974ರ ನಿಯಮ 192ರ ಅನ್ವಯ ಪ್ರತಿ ಕೇಂದ್ರ ಕಾರಾಗೃಹಕ್ಕೆ ಸ್ಥಾಯಿ ಸಲಹಾ ಮಂಡಳಿಯನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವಿರುತ್ತದೆ. ದೀರ್ಘಾವಧಿ ಶಿಕ್ಷೆಗೊಳಪಟ್ಟ ಅಪರಾಧಿಗಳನ್ನು ವಿಮರ್ಶಿಸುವುದು ಈ ಮಂಡಳಿಯ ಉದ್ದೇಶವಾಗಿರುತ್ತದೆ.

ಕೇಂದ್ರ ಕಾರಾಗೃಹದಲ್ಲಿರುವ ಸಲಹಾ ಮಂಡಳಿಯು ಈ ಕೆಳಕಂಡವರನ್ನು ಒಳಗೊಂಡಿರುತ್ತದೆ:–

| | |
|---|---|
| 1. ಜಿಲ್ಲಾಧಿಕಾರಿಗಳು, ಗುಲ್ಬರ್ಗಾ. | ಅಧ್ಯಕ್ಷರು |
| 2. ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ನ್ಯಾಯಾಧೀಶರು | ಸದಸ್ಯರು |
| 3. ಪೊಲೀಸ್ ವರಿಷ್ಠಾಧಿಕಾರಿಗಳು, | ಸದಸ್ಯರು |
| 4. ಜಿಲ್ಲಾ ಶಸ್ತ್ರ ಚಿಕಿತ್ಸಕರು | ಸದಸ್ಯರು |
| 5. ಮೂರು ಜನ ಸ್ಥಳೀಯ ಅಧಿಕಾರೇತರರು | ಸದಸ್ಯರು |
| 6. ಕೇಂದ್ರ ಕಾರಾಗೃಹದ ಮುಖ್ಯ ಅಧೀಕ್ಷಕರು/ಅಧೀಕ್ಷಕರು | ಕಾರ್ಯದರ್ಶಿ |

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರು ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿರುವ ಮೂರು ಜನ ಸ್ಥಳೀಯ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡಲು ಶಿಫಾರಸ್ಸು ಮಾಡುತ್ತಾ, ಗುಲ್ಬರ್ಗಾ ಕೇಂದ್ರ ಕಾರಾಗೃಹಕ್ಕೆ ಸಲಹಾ ಮಂಡಳಿಯನ್ನು ರಚಿಸುವಂತೆ ಕೋರಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 69 ಪಿಆರ್‌ಎ 2014, ಬೆಂಗಳೂರು, ದಿನಾಂಕ : 30ನೇ ಮೇ 2014.**

ಗುಲ್ಬರ್ಗಾ ಕೇಂದ್ರ ಕಾರಾಗೃಹದಲ್ಲಿ ದೀರ್ಘಾವಧಿ ಶಿಕ್ಷೆ ಅನುಭವಿಸುತ್ತಿರುವ ಅಪರಾಧಿಗಳನ್ನು ವಿಮರ್ಶಿಸುವ ಸಲುವಾಗಿ, ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 1974ರ ನಿಯಮ 192ರ ಅನ್ವಯ ಸರ್ಕಾರವು ಗುಲ್ಬರ್ಗಾ ಕೇಂದ್ರ ಕಾರಾಗೃಹಕ್ಕೆ ಗುಲ್ಬರ್ಗಾ ಉಸ್ತುವಾರಿ ಸಚಿವರು ಶಿಫಾರಸ್ಸು ಮಾಡಿರುವಂತೆ ಈ ಕೆಳಕಂಡಂತೆ ಸಲಹಾ ಮಂಡಳಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಿದೆ:–

| | |
|---|---|
| 1. ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡನಾಧಿಕಾರಿಗಳು, ಗುಲ್ಬರ್ಗಾ. | – ಅಧ್ಯಕ್ಷರು |
| 2. ಬೆಳಗಾವಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ನ್ಯಾಯಾಧೀಶರು, ಗುಲ್ಬರ್ಗಾ. | – ಸದಸ್ಯರು |
| 3. ಪೊಲೀಸ್ ವರಿಷ್ಠಧಿಕಾರಿಗಳು, ಗುಲ್ಬರ್ಗಾ. | – ಸದಸ್ಯರು |
| 4. ಜಿಲ್ಲಾ ಶಸ್ತ್ರ ಚಿಕಿತ್ಸಕರು, ಗುಲ್ಬರ್ಗಾ. | – ಸದಸ್ಯರು |
| 5. ಪ್ರೊ ಪರಿಮಳ ಅಂಬೇಕರ್, ಅಧ್ಯಕ್ಷರು, ಹಿಂದಿ ವಿಭಾಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ. | – ಸದಸ್ಯರು |
| 6. ಶ್ರೀ ರವೀಂದ್ರ ಬಾಳ್ಳಿ, ಜಂಟಿ ನಿರ್ದೇಶಕರು(ಪ್ರಭಾರ), ಉದ್ಯೋಗ ಮತ್ತು ತರಬೇತಿ ಇಲಾಖೆ, ಗುಲ್ಬರ್ಗಾ. | – ಸದಸ್ಯರು |
| 7. ಡಾ॥ ಸೊಹೆರ್‌ವರ್ದಿ ಅಸಿಫ್ ಅಲಿ, ರೆಸಿಡೆನ್ಷಿಯಲ್ ಮೆಡಿಕಲ್ ಆಫೀಸರ್, ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ. | – ಸದಸ್ಯರು |
| 8. ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ/ಅಧೀಕ್ಷಕರು ಗುಲ್ಬರ್ಗಾ | – ಕಾರ್ಯದರ್ಶಿ |

ಅಧಿಕಾರೇತರ ಸದಸ್ಯರ * ಅವಧಿಯು ಮೂರು ವರ್ಷಗಳಿಗೆ ಅಥವಾ ತತ್ಸಂಬಂಧ ಸರ್ಕಾರವು ಮುಂದೆ ನೀಡಬಹುದಾದ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇರುತ್ತದೆ.

ಈ ಸಲಹಾ ಮಂಡಳಿಯು ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 1974ರ ನಿಯಮ 193ರಲ್ಲಿ ತಿಳಿಸಿರುವಂತೆ ನಿಗಧಿತ ಕಾರ್ಯವನ್ನ ನಿರ್ವಹಿಸತಕ್ಕದ್ದಾಗಿರುತ್ತದೆ.

ಈ ಸಲಹಾ ಮಂಡಳಿಯ ಅಧಿಕಾರೇತರ ಸದಸ್ಯರು ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000 ದಿನಾಂಕ:03.02.2001ರಲ್ಲಿ ಹೊರಡಿಸಿದ ನಿಯಮಗಳನ್ವಯ ಹಾಗೂ ಸದರಿ ನಿಯಮಗಳಲ್ಲಿ ತಿಳಿಸಲಾಗಿರುವ ಷರತ್ತುಗಳಿಗೆ ಬದ್ಧವಾಗಿ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಸ್.ಜೋಗೋಜೆ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ).

**PR. 518**

**SC. 50**

## ಒಳಾಡಳಿತ ಸಚಿವಾಲಯ

**ವಿಷಯ:** ಬಿಜಾಪುರ ಕೇಂದ್ರ ಕಾರಾಗೃಹಕ್ಕೆ ಸಲಹಾ ಮಂಡಳಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರವರ ಪತ್ರ ಸಂಖ್ಯೆ: ಜೆ2/ಸಿಆರ್–63/2014 ದಿನಾಂಕ: 01.02.2014.

**ಪ್ರಸ್ತಾವನೆ:**

ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 1974ರ ನಿಯಮ 192ರ ಅನ್ವಯ ಪ್ರತಿ ಕೇಂದ್ರ ಕಾರಾಗೃಹಕ್ಕೆ ಸ್ಥಾಯಿ ಸಲಹಾ ಮಂಡಳಿಯನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವಿರುತ್ತದೆ. ದೀರ್ಘಾವಧಿ ಶಿಕ್ಷೆಗೊಳಪಟ್ಟ ಅಪರಾಧಿಗಳನ್ನು ವಿಮರ್ಶಿಸುವುದು ಈ ಮಂಡಳಿಯ ಉದ್ದೇಶವಾಗಿರುತ್ತದೆ.

ಕೇಂದ್ರ ಕಾರಾಗೃಹದಲ್ಲಿರುವ ಸಲಹಾ ಮಂಡಳಿಯು ಈ ಕೆಳಕಂಡವರನ್ನು ಒಳಗೊಂಡಿರುತ್ತದೆ:–

| | |
|---|---|
| 1. ಜಿಲ್ಲಾಧಿಕಾರಿಗಳು, ಬಿಜಾಪುರ. | ಅಧ್ಯಕ್ಷರು |
| 2. ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ನ್ಯಾಯಾಧೀಶರು | ಸದಸ್ಯರು |
| 3. ಪೊಲೀಸ್ ವರಿಷ್ಠಾಧಿಕಾರಿಗಳು, | ಸದಸ್ಯರು |
| 4. ಜಿಲ್ಲಾ ಶಸ್ತ್ರ ಚಿಕಿತ್ಸಕರು | ಸದಸ್ಯರು |
| 5. ಮೂರು ಜನ ಸ್ಥಳೀಯ ಅಧಿಕಾರೇತರರು | ಸದಸ್ಯರು |
| 6. ಕೇಂದ್ರ ಕಾರಾಗೃಹದ ಮುಖ್ಯ ಅಧೀಕ್ಷಕರು/ಅಧೀಕ್ಷಕರು | ಕಾರ್ಯದರ್ಶಿ |

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರು ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿರುವ ಮೂರು ಜನ ಸ್ಥಳೀಯ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡಲು ಶಿಫಾರಸ್ಸು ಮಾಡುತ್ತಾ, ಬಿಜಾಪುರ ಕೇಂದ್ರ ಕಾರಾಗೃಹಕ್ಕೆ ಸಲಹಾ ಮಂಡಳಿಯನ್ನು ರಚಿಸುವಂತೆ ಕೋರಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 53 ಪಿಆರ್‌ಎ 2014, ಬೆಂಗಳೂರು, ದಿನಾಂಕ : 30ನೇ ಮೇ 2014.**

ಬಿಜಾಪುರ ಕೇಂದ್ರ ಕಾರಾಗೃಹದಲ್ಲಿ ದೀರ್ಘಾವಧಿ ಶಿಕ್ಷೆ ಅನುಭವಿಸುತ್ತಿರುವ ಅಪರಾಧಿಗಳನ್ನು ವಿಮರ್ಶಿಸುವ ಸಲುವಾಗಿ, ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 1974ರ ನಿಯಮ 192ರ ಅನ್ವಯ ಸರ್ಕಾರವು ಬಿಜಾಪುರ ಕೇಂದ್ರ ಕಾರಾಗೃಹಕ್ಕೆ ಈ ಕೆಳಕಂಡಂತೆ ಸಲಹಾ ಮಂಡಳಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಿದೆ:–

| | |
|---|---|
| 1. ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡನಾಧಿಕಾರಿಗಳು, ಬಿಜಾಪುರ. | – ಅಧ್ಯಕ್ಷರು |
| 2. ಬೆಳಗಾವಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ನ್ಯಾಯಾಧೀಶರು, ಬಿಜಾಪುರ. | – ಸದಸ್ಯರು |
| 3. ಪೊಲೀಸ್ ವರಿಷ್ಠಧಿಕಾರಿಗಳು, ಬಿಜಾಪುರ. | – ಸದಸ್ಯರು |
| 4. ಜಿಲ್ಲಾ ಶಸ್ತ್ರ ಚಿಕಿತ್ಸಕರು, ಬಿಜಾಪುರ. | – ಸದಸ್ಯರು |
| 5. ಶ್ರೀ ಚಂದ್ರಶೇಖರ ಜಿ. ಕ್ಯಾತನ್, ನಿವೃತ್ತ ಪೊಲೀಸ್ ಅಧೀಕ್ಷಕರು. | – ಸದಸ್ಯರು |
| 6. ಶ್ರೀ ಮಲ್ಲಿಕಾರ್ಜುನ ಹೆಚ್.ಮುಲ್ಲಾಳ, ನಿವೃತ್ತ ತಹಶೀಲ್ದಾರ್. | – ಸದಸ್ಯರು |
| 7. ಶ್ರೀಮತಿ ಲಕ್ಷ್ಮೀ ದೇಸಾಯಿ, ವಕೀಲರು, ಬಾಗಲಕೋಟ ರಸ್ತೆ, ಬಿಜಾಪುರ. | – ಸದಸ್ಯರು |
| 8. ಮುಖ್ಯ ಅಧೀಕ್ಷಕರು/ಅಧೀಕ್ಷಕರು, ಕೇಂದ್ರ ಕಾರಾಗೃಹ, ಬಿಜಾಪುರ, | – ಕಾರ್ಯದರ್ಶಿ |

ಅಧಿಕಾರೇತರ ಸದಸ್ಯರ * ಅವಧಿಯು ಮೂರು ವರ್ಷಗಳಿಗೆ ಅಥವಾ ತತ್ಸಂಬಂಧ ಸರ್ಕಾರವು ಮುಂದೆ ನೀಡಬಹುದಾದ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇರುತ್ತದೆ.

ಈ ಸಲಹಾ ಮಂಡಳಿಯು ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 1974ರ ನಿಯಮ 193ರಲ್ಲಿ ತಿಳಿಸಿರುವಂತೆ ನಿಗಧಿತ ಕಾರ್ಯವನ್ನು ನಿರ್ವಹಿಸತಕ್ಕದ್ದಾಗಿರುತ್ತದೆ.

ಈ ಸಲಹಾ ಮಂಡಳಿಯ ಅಧಿಕಾರೇತರ ಸದಸ್ಯರು ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000 ದಿನಾಂಕ:03.02.2001ರಲ್ಲಿ ಹೊರಡಿಸಿದ ನಿಯಮಗಳನ್ವಯ ಹಾಗೂ ಸದರಿ ನಿಯಮಗಳಲ್ಲಿ ತಿಳಿಸಲಾಗಿರುವ ಷರತ್ತುಗಳಿಗೆ ಬದ್ಧವಾಗಿ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಸ್.ಜೋಗೋಜೆ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ).

**PR. 519**
**SC. 50**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಪ್ರಸ್ತುತ ಇರುವ ಅಪರ ಕಾರ್ಯದರ್ಶಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ವಿಶೇಷ ಕಾರ್ಯದರ್ಶಿ ಹುದ್ದೆಯನ್ನಾಗಿ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯದ ಅಧಿಕಾರಿಗಳ ಸಂಘ, ಬೆಂಗಳೂರು ಇವರ ಮನವಿ ದಿನಾಂಕ: 26/05/2012.

**ಪ್ರಸ್ತಾವನೆ:**

ಮೇಲೆ ಓದಲಾದ ಮನವಿಯಲ್ಲಿ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯದ ಅಧಿಕಾರಿಗಳ ಸಂಘ. ಬೆಂಗಳೂರು, ಇವರು ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಅಪರ ಕಾರ್ಯದರ್ಶಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಇಬ್ಬರು ಅಧಿಕಾರಿಗಳು ಕಳೆದ 13 ವರ್ಷಗಳಿಂದ ಬಡ್ತಿ ಅವಕಾಶವಿಲ್ಲದೆ ಸುದೀರ್ಘ ಸೇವೆ ಸಲ್ಲಿಸುತ್ತಿದ್ದಾರೆ. ಆದ್ದರಿಂದ, ಕೆ.ಎ.ಎಸ್.ವೃಂದದ ಅಧಿಕಾರಿಗಳಿಗೆ, ವಿಶೇಷ ಕಾರ್ಯದರ್ಶಿ, ಹುದ್ದೆಗಳನ್ನು ಸೃಜಿಸಿದಂತೆ ಹಾಗೂ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಿದಂತೆ, ಸಚಿವಾಲಯದ ಅಪರ ಕಾರ್ಯದರ್ಶಿ ಹುದ್ದೆಯಲ್ಲಿ ಸುದೀರ್ಘ ಸೇವೆ ಸಲ್ಲಿಸಿದ ಅಧಿಕಾರಿಗಳಿಗೆ ಬಡ್ತಿ ಅವಕಾಶ ಹಾಗೂ ಆಡಳಿತದಲ್ಲಿ ದಕ್ಷತೆಯನ್ನು ಹೆಚ್ಚಿಸುವ ದೃಷ್ಟಿಯಿಂದ 05 ವಿಶೇಷ ಕಾರ್ಯದರ್ಶಿ ಹುದ್ದೆಗಳನ್ನು ಸೃಜಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 360 ಸಅಸೇ 2012, ಬೆಂಗಳೂರು, ದಿನಾಂಕ:03–06–2014.**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಪ್ರಸ್ತುತ ಇರುವ ಅಪರ ಕಾರ್ಯದರ್ಶಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ವಿಶೇಷ ಕಾರ್ಯದರ್ಶಿ ಹುದ್ದೆಯನ್ನಾಗಿ (ವೇತನ ಶ್ರೇಣಿ ರೂ.56,500–79,800) ಉನ್ನತೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 38 ವೆಚ್ಚ–12/2014 ದಿನಾಂಕ:01.02.2014 ಹಾಗೂ ಸಂಖ್ಯೆ: ಆಇ 310 ವೆಚ್ಚ 12/2014, ದಿನಾಂಕ: 07.05.2014ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR. 482**

**ಡಾ॥ ಗೀತಾ ಎಲ್,**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ಸಿಆಸುಇ 07 ಗಕಾಸ 2013(ಭಾ–1) ಬೆಂಗಳೂರು, ದಿನಾಂಕ: 03–04–2014**

ಸರ್ಕಾರದ ಆದೇಶ ಕ್ರಮಾಂಕ ಸಿಆಸುಇ 07 ಗಕಾಸ 2013, ದಿನಾಂಕ: 20.01.2014ರಲ್ಲಿ ಅಧ್ಯಕ್ಷತೆಗಾಗಿ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಹಸ್ತಾಂತರಿಸಲಾಗಿರುವ ಸಮಿತಿಗಳ ಪೈಕಿ **"ಸಾಮಾನ್ಯ ಪ್ರವೇಶ ಪರೀಕ್ಷೆ ಸಮಿತಿ" ಯನ್ನು (ಅನುಬಂಧ–ಇ: ಕ್ರಮ ಸಂಖ್ಯೆ 18) ಹಿಂಪಡೆಯಲಾಗಿದೆ. "ಸಾಮಾನ್ಯ ಪ್ರವೇಶ ಪರೀಕ್ಷೆ ಸಮಿತಿ" ಯನ್ನು ಪುನಃ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿಯೇ ಮುಂದುವರೆಸಲಾಗಿದೆ.** (**ಅನುಬಂಧ–ಅ: ಕ್ರಮ ಸಂಖ್ಯೆ:37) "ಸಾಮಾನ್ಯ ಪ್ರವೇಶ ಪರೀಕ್ಷಾ ಸಮಿತಿ"** ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR. 483**
**SC. 200**

**ಎಂ.ವಿ.ಶಾಂತಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಡಳಿತ ಸುಧಾರಣೆ–ಕಾರ್ಯಾಧ್ಯಯನ–ಎ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಮುಂದುವರಿಯುತ್ತಿರುವ ತಾಂತ್ರಿಕ ಹುದ್ದೆಗಳನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 470 ಎಸ್‌ಜಿಬಿ 82; ದಿನಾಂಕ:01–09–1982.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33 ಸಸಿವಿ 96; ದಿನಾಂಕ: 24–02–1998.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 01 ಸಸಿವಿ 99; ದಿನಾಂಕ: 23–04–2001.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 2001; ದಿನಾಂಕ: 19–11–2001.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 89 ಸಸಿವಿ 2005; ದಿನಾಂಕ: 13–01–2006.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 101 ಸಸಿವಿ 2006; ದಿನಾಂಕ: 18–01–2007.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33 ಸಅಸೇ 2008; ದಿನಾಂಕ: 11–06–2008.
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 365 ಸಅಸೇ 2009; ದಿನಾಂಕ: 15–09–2009.
9. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 631 ಸಅಸೇ 2009; ದಿನಾಂಕ: 31–12–2009.
10. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 583 ಸಅಸೇ 2010; ದಿನಾಂಕ: 15–12–2010.
11. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 91 ಸಅಸೇ 2012; ದಿನಾಂಕ: 17–02–2012.
12. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 99 ಸಅಸೇ 2012; ದಿನಾಂಕ: 15–03–2012. ಮತ್ತು ಸೇರ್ಪಡೆ ಆದೇಶದ ದಿನಾಂಕ: 24–03–2012.
13. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಸಅಸೇ 2013; ದಿನಾಂಕ:18–05–2013.
14. ಅನಧಿಕೃತ ಟಿಪ್ಪಣಿ ಸಂಖ್ಯೆ: ಜಸಂಇ 173 ಎಂಎಂಕೆ 2013; ದಿನಾಂಕ:02–01–2014.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಜಲ ಸಂಪನ್ಮೂಲ ಇಲಾಖೆಯಲ್ಲಿ ತಾಂತ್ರಿಕ ಸಿಬ್ಬಂದಿ ವೃಂದದ 21 ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದ್ದು, ಸದರಿ ಹುದ್ದೆಗಳನ್ನು ಮೇಲೆ ಕ್ರಮ ಸಂಖ್ಯೆ(2) ರಿಂದ (7) ರವರೆಗೆ ಓದಲಾದ ಆದೇಶಗಳಲ್ಲಿ ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಹುದ್ದೆಗಳಲ್ಲಿ ವಿಶ್ವಬ್ಯಾಂಕ್ ಶಾಖೆಯ ಸರ್ಕಾರದ ಅಧೀನ ಕಾರ್ಯದರ್ಶಿ(ವಿಶ್ವಬ್ಯಾಂಕ್) ಹುದ್ದೆಯನ್ನು ತಾತ್ಕಾಲಿಕವಾಗಿ ನಿಲಂಬನೆಯಲ್ಲಿಟ್ಟು ಹೊಸದಾಗಿ ವಿಶೇಷಾಧಿಕಾರಿ(ವಿಶ್ವಬ್ಯಾಂಕ್) ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (9) ರಿಂದ (11) ರವರೆಗೆ ಓದಲಾದ ಆದೇಶಗಳಲ್ಲಿ ಮತ್ತೆ ಸದರಿ ಹುದ್ದೆಗಳನ್ನು ಮುಂದುವರಿಸಿಕೊಂಡು ಬರಲಾಗಿದ್ದು, ಈ ಹುದ್ದೆಗಳ ಅವಧಿಯು ದಿನಾಂಕ:31.12–2012 ರಂದು ಮುಕ್ತಾಯಗೊಳ್ಳುತ್ತದೆ. ಮೇಲೆ ಕ್ರಮ ಸಂಖ್ಯೆ (12) ರಲ್ಲಿ ಓದಲಾದ ಆದೇಶ ಮತ್ತು ಸೇರ್ಪಡೆ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯಲ್ಲಿ ಈ ಹಿಂದೆ ತಾತ್ಕಾಲಿಕವಾಗಿ ಸೃಜಿಸಲಾಗಿದ್ದ ವಿಶೇಷಾಧಿಕಾರಿ (ವಿಶ್ವಬ್ಯಾಂಕ್) ಹುದ್ದೆಯನ್ನು ತಾತ್ಕಾಲಿಕವಾಗಿ ನಿಲಂಬನೆಯಲ್ಲಿಟ್ಟು, ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ–4) ಹುದ್ದೆಯನ್ನು ತಾತ್ಕಾಲಿಕವಾಗಿ ದಿನಾಂಕ:15.03.2012 ರಿಂದ ಜಾರಿಗೆ ಬರುವಂತೆ ಸೃಜಿಸಿ ಆದೇಶಿಸಲಾಗಿದೆ. ಸದರಿ ಹುದ್ದೆಯ ಅವಧಿಯು ದಿನಾಂಕ: 15.03.2013ಕ್ಕೆ ಮುಕ್ತಾಯವಾಗುತ್ತದೆ.

ಮೇಲೆ ಕ್ರಮ ಸಂಖ್ಯೆ(13)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯ ತಾಂತ್ರಿ ಹುದ್ದೆಗಳಾದ ಉಪ ಕಾರ್ಯದರ್ಶಿ(ಎಂಎಂಐ), ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ, ಎಂಎಂಐ–3) ಮತ್ತು ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ–4) ಹುದ್ದೆಗಲನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:01.01.2013 ರಿಂದ 31.12.2013 ರವರೆಗೆ ಮುಂದುವರಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ:(14) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಜಲ ಸಂಪನ್ಮೂಲ ಇಲಾಖೆಯ (ಅ) ಸರ್ಕಾರದ ಉಪ ಕಾರ್ಯದರ್ಶಿಗಳು (ಬೃಹತ್ ಮತ್ತು ಮಧ್ಯಮ ನೀರಾವರಿ), (ಆ) ವಿಶೇಷ ಕರ್ತವ್ಯಾಧಿಕಾರಿಗಳು (ತಾಂತ್ರಿಕ, ಎಂಎಂಐ–3), ಹಾಗೂ (ಇ) ಅಧೀನ ಕಾರ್ಯದರ್ಶಿಗಳು (ತಾಂತ್ರಿಕ–4) ಶಾಖೆಗಳಡಿಯಲ್ಲಿ ಕಾವೇರಿ ನೀರಾವರಿ ನಿಗಮ ನಿಯಮಿತ, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಕರ್ನಾಟಕ ನೀರಾವರಿ ನಿಗಮ ನಿಯಮಿತದ ಯೋಜನೆಗಳು ಇರುತ್ತವೆಂದೂ ಬಹಳಷ್ಟು ಯೋಜನೆಗಳು ಪ್ರಗತಿಯಲ್ಲಿದ್ದು, ಇಲಾಖಾ ಕಾರ್ಯಗಳೂ ಸಹ ಪ್ರಗತಿಯಲ್ಲಿರುತ್ತವೆಂದು ತಿಳಿಸುತ್ತಾ ಸದರಿ ಶಾಖೆಗಳಲ್ಲಿ ಕಾರ್ಯಭಾರ ಅಧಿಕವಾಗಿರುವುದರಿಂದ ಸದರಿ ಶಾಖೆಗಳನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ಮುಂದುವರಿಸುವುದು ಅವಶ್ಯಕವಾಗಿದ್ದು, ದಿನಾಂಕ:01/01/2014 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲು ಕೋರಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | **(ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ** | |
| | 1. ಉಪಕಾರ್ಯದರ್ಶಿ | 01 |
| | 2. ಶೀಘ್ರಲಿಪಿಗಾರ | 01 |
| | 3. ಕಿರಿಯ ಸಹಾಯಕ | 01 |
| | 4. ದಲಾಯತ್ | 01 |
| | **ಒಟ್ಟು** | **04** |
| 2 | **ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ–3** | |
| | 1. ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) | 01 |
| | 2. ಶಾಖಾಧಿಕಾರಿ | 01 |
| | 3. ಹಿರಿಯ ಸಹಾಯಕರು | 02 |
| | 4. ಸಹಾಯಕರು | 01 |
| | 5. ಶೀಘ್ರಲಿಪಿಗಾರ | 01 |
| | 6. ಕಿರಿಯ ಸಹಾಯಕ | 01 |
| | 7. ಬೆರಳಚ್ಚುಗಾರ | 01 |
| | 8. ದಲಾಯತ್ | 01 |
| | **ಒಟ್ಟು** | **09** |
| 3 | **ತಾಂತ್ರಿಕ–4 ಶಾಖೆ** | |
| | 1. ಸರ್ಕಾರದ ಅಧೀನ ಕಾರ್ಯದರ್ಶಿ | 01 |
| | 2. ಶಾಖಾಧಿಕಾರಿ | 01 |
| | 3. ಹಿರಿಯ ಸಹಾಯಕ | 01 |
| | 4. ಸಹಾಯಕ | 01 |
| | 5. ಶೀಘ್ರಲಿಪಿಗಾರ | 01 |
| | 6. ಕಿರಿಯ ಸಹಾಯಕ | 01 |
| | 7. ಬೆರಳಚ್ಚುಗಾರ | 01 |
| | 8. ದಲಾಯತ್ | 01 |
| | **ಒಟ್ಟು** | **08** |

**ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.**

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 19 ಸಲುಸೇ 2014, ಬೆಂಗಳೂರು, ದಿನಾಂಕ:03-04-2014.**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಈ ಕೆಳಕಂಡ ತಾಂತ್ರಿಕ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ:01-01-2014 ರಿಂದ 31-12-2014 ರವರೆಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | (ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ | |
| | 1. ಉಪ ಕಾರ್ಯದರ್ಶಿ | 01 |
| | 2. ಶೀಘ್ರಲಿಪಿಗಾರ | 01 |
| | 3. ಕಿರಿಯ ಸಹಾಯಕ | 01 |
| | 4. ದಲಾಯತ್ | 01 |
| | ಒಟ್ಟು | **04** |
| 2 | ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ-3 | |
| | 1. ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) | 01 |
| | 2. ಶಾಖಾಧಿಕಾರಿ | 01 |
| | 3. ಹಿರಿಯ ಸಹಾಯಕರು | 02 |
| | 4. ಸಹಾಯಕ | 01 |
| | 5. ಶೀಘ್ರಲಿಪಿಗಾರ | 01 |
| | 6. ಕಿರಿಯ ಸಹಾಯಕ | 01 |
| | 7. ಬೆರಳಚ್ಚುಗಾರ | 01 |
| | 8. ದಲಾಯತ್ | 01 |
| | ಒಟ್ಟು | **09** |
| 3 | ತಾಂತ್ರಿಕ-4 ಶಾಖೆ | |
| | 1. ಸರ್ಕಾರದ ಅಧೀನ ಕಾರ್ಯದರ್ಶಿ | 01 |
| | 2. ಶಾಖಾಧಿಕಾರಿ | 01 |
| | 3. ಹಿರಿಯ ಸಹಾಯಕ | 01 |
| | 4. ಸಹಾಯಕ | 01 |
| | 5. ಶೀಘ್ರಲಿಪಿಗಾರ | 01 |
| | 6. ಕಿರಿಯ ಸಹಾಯಕ | 01 |
| | 7. ಬೆರಳಚ್ಚುಗಾರ | 01 |
| | 8. ದಲಾಯತ್ | 01 |
| | ಒಟ್ಟು | **08** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10-07-1996ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ್,**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6)

**PR. 484**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಆರ್ಥಿಕ ಇಲಾಖೆಯಲ್ಲಿ ಪ್ರಧಾನ ಕಾರ್ಯದರ್ಶಿ (ಖಜಾನೆ-II) ಹುದ್ದೆಯನ್ನು ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 274 ಸಅಸೇ 2013, ದಿನಾಂಕ:15-04-2013.

2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಬೆಂಗಳೂರು; ಇವರ ಕಡತ ಸಂಖ್ಯೆ:ಆಇ/1273/ಪ್ರಕಾ/2014.

**ಪ್ರಸ್ತಾವನೆ:-**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಎಲ್ಲಾ ಇಲಾಖೆಗಳ ಖರ್ಚು-ವೆಚ್ಚಗಳನ್ನೊಳಗೊಂಡ ಕ್ರೋಢೀಕೃತ ಆರ್ಥಿಕ ನಿರ್ವಹಣಾ ತಂತ್ರಾಂಶ 'ಖಜಾನೆ-II'ನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಆರ್ಥಿಕ ಇಲಾಖೆಯಲ್ಲಿ ಪ್ರಧಾನ ಕಾರ್ಯದರ್ಶಿ(ಖಜಾನೆ- II) ಎಂಬ ಹುದ್ದೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ತಾತ್ಕಾಲಿಕವಾಗಿ ಸೃಜಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಕಡತದಲ್ಲಿ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆರವರು ಈ ಯೋಜನೆಯ ಪೈಲಟ್‌ನ್ನು ಸೆಪ್ಟೆಂಬರ್/ಅಕ್ಟೋಬರ್ 2014ರ ಮಾಹೆಯಲ್ಲಿ ಜಾರಿಗೆ ತರಲು ನಿರೀಕ್ಷಿಸಲಾಗಿದ್ದು, ತದನಂತರ ಯೋಜನೆಯ ಎಲ್ಲಾ ಮಾಡ್ಯೂಲ್‌ಗಳನ್ನು ಸಂಪೂರ್ಣವಾಗಿ ಅಳವಡಿಸಿಕೊಳ್ಳಲು 10-12 ತಿಂಗಳುಗಳ ಕಾಲಾವಕಾಶವು ಬೇಕಾಗಿದ್ದು, ಇದಕ್ಕಾಗಿ ಪ್ರಧಾನ ಕಾರ್ಯದರ್ಶಿ, ಖಜಾನೆ-2, ಹುದ್ದೆಯ ಅಗತ್ಯವಿರುವುದರಿಂದ ಈ ಹುದ್ದೆಯನ್ನು ದಿನಾಂಕ:15-04-2014 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 129 ಸಅಸೇ 2014, ಬೆಂಗಳೂರು, ದಿನಾಂಕ: 20ನೇ ಮೇ 2014**

ಎಲ್ಲಾ ಇಲಾಖೆಗಳ ಖರ್ಚು-ವೆಚ್ಚಗಳನ್ನೊಳಗೊಂಡ ಆರ್ಥಿಕ ನಿರ್ವಹಣಾ ತಂತ್ರಾಂಶ "ಖಜಾನೆ- II"ರ ಸಮರ್ಪಕ ಅನುಷ್ಠಾನಕ್ಕಾಗಿ ಆರ್ಥಿಕ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿದ್ದ ಪ್ರಧಾನ ಕಾರ್ಯದರ್ಶಿ (ಖಜಾನೆ- II) ಹುದ್ದೆಯನ್ನು ದಿನಾಂಕ:15-04-2014ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96; ದಿನಾಂಕ:10-07-1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR. 485

**ಚಂದ್ರಶೇಖರ,**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-6)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಸಿ.ಕೆ.ವಾಸುದೇವ ಮೂರ್ತಿ, ಸರ್ಕಾರದ ಉಪ ಕಾರ್ಯದರ್ಶಿ (ಅಂತರ ರಾಜ್ಯ ಜಲ ವಿವಾದ ಮತ್ತು ಮಾನವ ಹಕ್ಕುಗಳು), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಇವರಿಗೆ ಪ್ರಭಾರ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1) ಅಧಿಸೂಚನೆ ಸಂಖ್ಯೆ: ಲಾ 89 ಎಲ್‌ಎಎಂ 2013; ದಿನಾಂಕ: 29-06-2013.

2) ಪ್ರಭಾರ ಭತ್ಯೆ ಅರ್ಜಿ ದಿನಾಂಕ:05-02-2014.

**ಪ್ರಸ್ತಾವನೆ:-**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಶ್ರೀಮತಿ ರುಕ್ಮಿಣಿ ದಿವಾಕರ್, ಸರ್ಕಾರದ ಉಪ ಕಾರ್ಯದರ್ಶಿ. ಆಡಳಿತ-2, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಇವರು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 646 ಸಅಸೇ 2012; ದಿನಾಂಕ:01-10-2012 ರನ್ವಯ ಸರ್ಕಾರಿ ಸೇವೆಯಿಂದ ದಿನಾಂಕ:30-06-2013 ರಂದು ವಯೋನಿವೃತ್ತಿ ಹೊಂದಲಿರುವುದರಿಂದ ತೆರವಾದ ಹುದ್ದೆಯಲ್ಲಿ ಶ್ರೀ.ಸಿ.ಕೆ.ವಾಸುದೇವ ಮೂರ್ತಿ, ಸರ್ಕಾರದ ಉಪ ಕಾರ್ಯದರ್ಶಿ, ಅಂರಾಜವಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಇವರನ್ನು ದಿನಾಂಕ:01-07-2013 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧಿಕ ಪ್ರಭಾರದಲ್ಲಿಡಲಾಗಿದೆ. ಅದರಂತೆ ಅಧಿಕಾರಿಯವರು ದಿನಾಂಕ:01-07-2013 ರಿಂದ ದಿನಾಂಕ:10-09-2013 ರವರೆಗಿನ ಅವಧಿಗೆ ಸರ್ಕಾರದ ಉಪ ಕಾರ್ಯದರ್ಶಿ, ಆಡಳಿತ-2, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಹುದ್ದೆಯ ಹೆಚ್ಚುವರಿ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸಿದ್ದು ಸದರಿ ಅವಧಿಗೆ ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 47 ಸಲುಸೇ 2014, ಬೆಂಗಳೂರು, ದಿನಾಂಕ: 28ನೇ ಮೇ 2014.**

ಶ್ರೀ.ಸಿ.ಕೆ.ವಾಸುದೇವ ಮೂರ್ತಿ, ಸರ್ಕಾರದ ಉಪ ಕಾರ್ಯದರ್ಶಿ, ಅಂರಾಜವಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಇವರು ಸರ್ಕಾರದ ಉಪ ಕಾರ್ಯದರ್ಶಿ, ಆಡಳಿತ-2, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಹುದ್ದೆಯಲ್ಲಿ ದಿನಾಂಕ:01-07-2013 ರಿಂದ ದಿನಾಂಕ;10-09-2013 ರವರೆಗಿನ ಅವಧಿಗೆ ಅಧಿಕ ಪ್ರಭಾರದಲ್ಲಿ ಕಾರ್ಯ ನಿರ್ವಹಿಸಿರುವುದಕ್ಕಾಗಿ, ಉಪ ಕಾರ್ಯದರ್ಶಿ ಹುದ್ದೆಯ ವೇತನ ಶ್ರೇಣಿ

ರೂ.40,050–56,550 ರ ಕನಿಷ್ಠ ವೇತನದ ಶೇಕಡ 7.5 ರಷ್ಟು ಪ್ರಭಾರ ಭತ್ಯೆಯನ್ನು ಸದರಿ ಅಧಿಕಾರಿಯವರಿಗೆ ಸರ್ಕಾರದ ಆದೇಶ ಸಂಖ್ಯೆ: ಆಇ 3 ಸೇನಿಸೇ 2012; ದಿನಾಂಕ:14–06–2012 ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮ (68) ರ ಅನ್ವಯ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR. 486

**ಚಂದ್ರಶೇಖರ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ರಾಜ್ಯ ಮಟ್ಟದ ಏಕಗವಾಕ್ಷಿ ಸಮಿತಿ ಹಾಗೂ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿಯ ಮುಂದೆ ಬರುವ ಪ್ರಸ್ತಾವನೆಗಳಿಗೆ ಅವಶ್ಯಕವಿರುವ ಜಮೀನನ್ನು ಪರಿಶೀಲಿಸಲು ಜಮೀನು ಪರಿಶೋಧನಾ ಸಮಿತಿ (Land Audit Committee) ಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಸಿಐ 158 ಎಸ್‌ಪಿಐ 2011, ದಿನಾಂಕ: 24.06.2013.

**ಪ್ರಸ್ತಾವನೆ:–**

ಕೈಗಾರಿಕೆ ಸ್ಥಾಪನಾ ಪ್ರಸ್ತಾವನೆಗಳು ಅನೇಕ ಸಲ ತಮ್ಮ ಅವಶ್ಯಕತೆಗಿಂತಲೂ ಹೆಚ್ಚಿನ ಜಮೀನನ್ನು ಕೋರುತ್ತಿದ್ದು, ಇದರಿಂದಾಗಿ ಹೆಚ್ಚಿನ ಕೃಷಿ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲಾಗುತ್ತಿದೆ ಎಂದು ಸಾರ್ವಜನಿಕರಿಂದ ಆಕ್ಷೇಪಣೆಗಳು ಬರುತ್ತಿರುವ ಹಿನ್ನೆಲೆಯಲ್ಲಿ ರಾಜ್ಯ ಮಟ್ಟದ ಏಕಗವಾಕ್ಷಿ ಸಮಿತಿ (SLSWCC) ಹಾಗೂ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿ ಸಭೆ (SHLCC) ಮುಂದೆ ಬರುವ ಪ್ರಸ್ತಾವನೆಗಳಿಗೆ ಅವಶ್ಯವಿರುವ ಜಮೀನಿನ ಬಗ್ಗೆ ಸಲಹೆ ನೀಡಲು ಜಮೀನು ಪರಿಶೋಧನಾ ಸಮಿತಿ ರಚಿಸುವುದು ಅವಶ್ಯವಿದ್ದ ಕಾರಣ, ದಿನಾಂಕ: 17.06.2013 ರಂದು ನಡೆದ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿ ಸಭೆ (SHLCC) ಯಲ್ಲಿ ಮಾನ್ಯ ಮುಖ್ಯಮಂತ್ರಿಗಳು ಜಮೀನು ಪರಿಶೋಧನಾ ಸಮಿತಿ ರಚಿಸಬೇಕು ಹಾಗೂ ಎಲ್ಲಾ ಪ್ರಸ್ತಾವನೆಗಳ ಜಮೀನಿನ ಅವಶ್ಯಕತೆ ಬಗ್ಗೆ ಮೊದಲೇ ತಿಳಿಸಬೇಕೆಂದು ಸೂಚಿಸಿದ ಹಿನ್ನೆಲೆಯಲ್ಲಿ, ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿ ಸಭೆ (SHLCC) ಹಾಗೂ ರಾಜ್ಯ ಮಟ್ಟದ ಏಕಗವಾಕ್ಷಿ ಸಮಿತಿ ಸಭೆ (SLSWCC) ಮುಂದೆ ಬರುವ ಪ್ರಸ್ತಾವನೆಗಳಿಗೆ ಅವಶ್ಯವಿರುವ ಜಮೀನು ಪರಿಶೀಲಿಸಲು ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಜಮೀನು ಪರಿಶೀಲನಾ ಸಮಿತಿ (Land Audit Committee) ಯನ್ನು ರಚಿಸಿ ಮೇಲೆ ಓದಲಾದ (1)ರ ಆದೇಶವನ್ನು ಹೊರಡಿಸಲಾಗಿದೆ.

ಪ್ರಸ್ತುತ, ಜಮೀನು ಪರಿಶೀಲನಾ ಸಮಿತಿ (Land Audit Committee) ಯು ಪರಿಣಾಮಕಾರಿಯಾಗಿ ಕೆಲಸ ಮಾಡುವಂತೆ ಮಾಡಲು ಅಪರ ಮುಖ್ಯ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಜಮೀನು ಪರಿಶೀಲನಾ ಸಮಿತಿ (Land Audit Committee) ಸಮಿತಿಯನ್ನು ಪುನರ್ ರಚಿಸಬೇಕೆಂದು ನಿರ್ಧರಿಸಲಾಗಿರುತ್ತದೆ.

ಅದರಂತೆ ಈ ಮುಂದಿನ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 158 ಎಸ್‌ಪಿಐ 2011, ಬೆಂಗಳೂರು, ದಿನಾಂಕ:17–05–2014.**

ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿ ಸಭೆ (SHLCC) ಹಾಗೂ ರಾಜ್ಯ ಮಟ್ಟದ ಏಕಗವಾಕ್ಷಿ ಸಮಿತಿ ಸಭೆ (SLSWCC) ಮುಂದೆ ಬರುವ ಎಲ್ಲಾ ಪ್ರಸ್ತಾವನೆಗಳಿಗೆ ಅವಶ್ಯವಿರುವ ಜಮೀನನ್ನು ಪರಿಶೀಲಿಸಲು ಹಾಗೂ ಮಂಜೂರು ಮಾಡಲು ಶಿಫಾರಸ್ಸು ಮಾಡುವುದಕ್ಕಾಗಿ ಅಪರ ಮುಖ್ಯ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಜಮೀನು ಪರಿಶೀಲನಾ ಸಮಿತಿ (Land Audit Committee) ಯನ್ನು ಈ ಮುಂದಿನಂತೆ ಪುನರ್ ರಚಿಸಲಾಗಿದೆ.

| | | | |
|---|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | : | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | : | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | : | ಸದಸ್ಯರು |
| 4. | ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ | : | ಸದಸ್ಯ ಕಾರ್ಯದರ್ಶಿ |
| 5. | ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಕೆ.ಐ.ಎ.ಡಿ.ಬಿ. | : | ಸದಸ್ಯರು |
| 6. | ಮುಖ್ಯ ಸಲಹೆಗಾರರು, ಕರ್ನಾಟಕ ತಾಂತ್ರಿಕ ಸಲಹಾ ಸೇವಾ ಸಂಸ್ಥೆ (ಟೆಕ್ಸಾಕ್) | : | ಸದಸ್ಯರು |
| 7. | ನಿರ್ದೇಶಕರು (ತಾಂತ್ರಿಕ ಕೋಶ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | : | ಸದಸ್ಯರು |
| 8. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ | : | ಸದಸ್ಯರು |
| 9. | ರಾಜ್ಯ ಪರಿಸರ ಮಾಲಿನ್ಯ ಮಂಡಳಿ ಸದಸ್ಯ ಕಾರ್ಯದರ್ಶಿ | : | ಸದಸ್ಯರು |

ಜಮೀನು ಪರಿಶೀಲನಾ ಸಮಿತಿ (Land Audit Committee) ಯು ಜಮೀನಿನ ಅವಶ್ಯಕತೆಯನ್ನು ಪರಿಗಣಿಸುವಾಗ:

a) ಬಂಡವಾಳ ಹೂಡಿಕೆಯ ಪ್ರವರ್ತಕರು ಕೇಳಿದ ಜಮೀನಿನ ಪ್ರಸ್ತಾಪಿತ ಉಪಯೋಗವನ್ನು ಪರಿಶೀಲಿಸಬೇಕು ಹಾಗೂ ಕೇಳಿರುವ ಜಮೀನು ಸ್ವಾಧೀನ ಆಗಿದೆಯೇ ಅಥವಾ ಇಲ್ಲವೇ ಮತ್ತು ಕೆಐಎಡಿಬಿ ಯಿಂದ ಜಮೀನು ಹಂಚಿಕೆ ಮಾಡುವ ಹಂತದಲ್ಲಿ ಇದೆಯೇ ಎಂಬುದನ್ನೂ ಕೂಡ ಪರಿಶೀಲಿಸಬೇಕು. ಸದರಿ ಕೈಗಾರಿಕಾ ಪ್ರದೇಶದಲ್ಲಿ ವಿದ್ಯುತ್, ನೀರು ಮತ್ತು ಇತರೆ ಮೂಲಭೂತ ಸೌಕರ್ಯಗಳು ಇದೆಯೇ ಎಂಬುದನ್ನು ಪರಿಶೀಲಿಸಬೇಕು.

b) ಬಂಡವಾಳ ಹೂಡಿಕೆಯ ಪ್ರವರ್ತಕರು ಕೇಳುತ್ತಿರುವ ಜಮೀನಿನ ಸದ್ಯದ ಸ್ಥಿತಿಗತಿಗಳನ್ನು ಅಂದರೆ ಕೈಗಾರಿಕಾ ಪ್ರದೇಶ ಕೃಷಿ ಭೂಮಿಯೇ/ ಬಂಜರು ಭೂಮಿಯೇ/ ಸರ್ಕಾರದ ಜಮೀನೇ/ಪರಿವರ್ತಿತ ಜಮೀನೇ ಅಥವಾ ನಿಗದಿತ ಹಸಿರು ವಲಯವೇ ಎಂಬುದನ್ನು ವರದಿಯಲ್ಲಿ ಹೆಸರಿಸಬೇಕು.

c) ಕೈಗಾರಿಕಾ ವಿಸ್ತರಣಾ ಕಾರ್ಯಕ್ರಮಕ್ಕೆ ಬೇಕಾದ ಜಮೀನನ್ನೂ ಕೂಡಾ ಪರಿಗಣನೆಗೆ ತೆಗೆದುಕೊಳ್ಳಬೇಕು.

d) ಇದಲ್ಲದೇ, ಏಕಘಟಕ ಸಂಕೀರ್ಣಕ್ಕೆ ಪ್ರಸ್ತಾಪಿಸಿದ ಜಮೀನು ನೀರಾವರಿಯ ಜಮೀನೇ ಅಥವಾ ಕೃಷಿ ಯೋಗ್ಯದ ಜಮೀನೇ ಎಂಬುದನ್ನೂ ಕೂಡಾ ಪರಿಶೀಲಿಸಬೇಕು.

e) ಭೂಮಿ ಹಂಚಿಕೆ ಕುರಿತಂತೆ ಈ ಹಿಂದೆ ಹೊರಡಿಸಲಾದ ಎಲ್ಲಾ ಆದೇಶ/ಮಾರ್ಗಸೂಚಿಗಳನ್ನು ರದ್ದುಪಡಿಸಿ, ಕೆಐಎಡಿ ಕಾಯ್ದೆ 1966 ರ ಕಲಂ 17 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಯಾವುದೇ ಯೋಜನೆಗಳಿಗೆ ನೇರವಾಗಿ ಜಮೀನು ಹಂಚಿಕೆ ಮಾಡಬಾರದೆಂದು ನಿರ್ದೇಶಿಸಲಾಗಿದೆ. ಜಮೀನು ಪರಿಶೋಧನಾ ಸಮಿತಿಯು ಪರಿಶೋಧನೆಯ ಅಗತ್ಯ ಇದ್ದಲ್ಲಿ ಅದರ ಅಭಿಪ್ರಾಯದೊಂದಿಗೆ ಎಸ್‌ಹೆಚ್‌ಎಲ್‌ಸಿಸಿ ಮತ್ತು ಎಸ್‌ಎಲ್‌ಎಸ್‌ಡಬ್ಲ್ಯೂಸಿಸಿ ಸಮಿತಿಗಳಲ್ಲಿ ಅನುಮೋದನೆಗೊಂಡ ಯೋಜನೆಗಳಿಗೆ ಮಾತ್ರ ಹಂಚಿಕೆ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR. 487**
**SC - 100**

**ಕೆ. ರತ್ನ ಪ್ರಭಾ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ** : ಶ್ರೀ ಅಬ್ದುಲ್ ಖದೀರ್, ಸರ್ಕಾರದ ಅಪರ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಇ–ಆಡಳಿತ), ಕರ್ನಾಟಕ ಸರ್ಕಾರದ ಸಚಿವಾಲಯ, ಇವರ ಜನ್ಮ ದಿನಾಂಕವನ್ನು ಸೇವಾ ಪುಸ್ತಕದಲ್ಲಿ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ :**
1. ಶ್ರೀ ಅಬ್ದುಲ್ ಖದೀರ್, ಸರ್ಕಾರದ ಅಪರ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಇ–ಆಡಳಿತ), ಇವರು ಸಲ್ಲಿಸಿದ ದಿನಾಂಕ: 22–01–2013ರ ಮನವಿ.
2. ಸರ್ಕಾರದ ಅಧಿಸೂಚನೆ ಸಂ: ಸಿಆಸುಇ 72 ಸಅಸೇ 2013, ದಿನಾಂಕ: 28–06–2013.
3. ಸರ್ಕಾರದ ಉಪ ಕಾರ್ಯದರ್ಶಿ (ಅಭಿಪ್ರಾಯ–1) ಹಾಗೂ ವಿಚಾರಣಾಧಿಕಾರಿಗಳು, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಇವರ ಪತ್ರ ಸಂ: ಎಲ್‌ಎಡಬ್ಲ್ಯೂ 55 ಡಿಎಸ್(ಒಪಿಎನ್–1) 2013, ದಿನಾಂಕ: 19–02–2014ರ ರೊಂದಿಗೆ ಸಲ್ಲಿಸಿದ ವಿಚಾರಣಾ ವರದಿ.

**ಪ್ರಸ್ತಾವನೆ :**

1. ಮೇಲೆ ಕ್ರಮ ಸಂಖ್ಯೆ (1)ರ ಓದಲಾದ ದಿನಾಂಕ: 22–01–2013ರ ಮನವಿಯಲ್ಲಿ ಶ್ರೀ ಅಬ್ದುಲ್ ಖದೀರ್, ಪ್ರಸ್ತುತ ಸರ್ಕಾರದ ಅಪರ ಕಾರ್ಯದರ್ಶಿ ಸಿ.ಆ.ಸು.ಇಲಾಖೆ (ಇ–ಆಡಳಿತ), ಇವರು ತಾವು ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಆಯ್ಕೆಯಾಗಿ ದಿನಾಂಕ:03–09–1977ರಂದು ಕಿರಿಯ ಸಹಾಯಕನಾಗಿ ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗೆ ಸೇರಿದ್ದು, ಸೇವೆಗೆ ಸೇರಿದ ಕೂಡಲೇ ಸಂಬಂಧಿಸಿದ ಪುರಸಭೆ ಹಿಂದುಪುರ. (ಅನಂತಪುರ ಜಿಲ್ಲೆ, ಆಂಧ್ರಪ್ರದೇಶ) ನೀಡಿದ ಜನ್ಮ ದಿನಾಂಕದ ಪ್ರಮಾಣ ಪತ್ರದ ಆಧಾರದ ಮೇಲೆ The Karnataka State Servants (Determination of Age) Act, 1974 ರ ಕಲಂ 5 ರಡಿ ಪರಿಗಣಿಸಿ ತಮ್ಮ ಜನ್ಮ ದಿನಾಂಕವನ್ನು ಬದಲಾಯಿಸಿ, ಅದನ್ನು ಸೇವಾ ಪುಸ್ತಕದಲ್ಲಿ ಸರಿಪಡಿಸುವಂತೆ ಕೋರಿ ಸರ್ಕಾರಕ್ಕೆ ದಿನಾಂಕ: 07–10–1977 ರ ಮನವಿಯಲ್ಲಿ ಕೋರಿಕೆ ಸಲ್ಲಿಸಿರುವುದಾಗಿ ತಿಳಿಸಿ, ಅದಕ್ಕೆ ಪೂರಕವಾಗಿ, ಹಿಂದುಪುರ ಪುರಸಭೆ, ನೀಡಿರುವ ಜನ್ಮ ದಿನಾಂಕದ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಒದಗಿಸಿ ಅದರನ್ವಯ ತಮ್ಮ ಜನ್ಮ ದಿನಾಂಕವು 13–03–1955 ಆಗಿರುತ್ತದೆ, ಆದರೆ ಸೇವಾ ಪುಸ್ತಕದಲ್ಲಿ ತಮ್ಮ ಜನ್ಮ ದಿನಾಂಕ: 01–07–1954 ಆಗಿ ದಾಖಲಿಸಲಾಗಿದೆ. ಈ ಹಿನ್ನೆಲೆಯಲ್ಲಿ ಈ ಹಿಂದೆ ಸಲ್ಲಿಸಿದ ಮನವಿಯನ್ನು (The Karnataka State Servants (Determination of Age) Act, 1974 ರ ಕಲಂ 5 ರಡಿ ಪರಿಗಣಿಸಿ ಜನ್ಮ ದಿನಾಂಕವನ್ನು ಸೇವಾ ಪುಸ್ತಕದಲ್ಲಿ ಸರಿಪಡಿಸುವಂತೆ ಮತ್ತೊಮ್ಮೆ ಕೋರಿದ್ದರು.

2. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 28–06–2013ರ ಅಧಿಸೂಚನೆಯಲ್ಲಿ ಶ್ರೀ ಅಬ್ದುಲ್ ಖದೀರ್, ಅವರ ಜನ್ಮ ದಿನಾಂಕವನ್ನು ಸೇವಾ ಪುಸ್ತಕದಲ್ಲಿ ತಿದ್ದುಪಡಿ ಮಾಡುವ ಬಗ್ಗೆ The Karnataka State Servants (Determination of Age) Act, 1974 ರ ಕಲಂ 5(3) ರನ್ವಯ ವಿಚಾರಣೆಯನ್ನು ನಡೆಸುವ ಸಲುವಾಗಿ ಸರ್ಕಾರದ ಉಪ ಕಾರ್ಯದರ್ಶಿ (ಅಭಿಪ್ರಾಯ–1), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ(ಸೇವೆಗಳು–6), ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಗಿರುತ್ತದೆ.

3. ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 19–02–2014ರ ಪತ್ರದೊಂದಿಗೆ ಸರ್ಕಾರದ ಉಪ ಕಾರ್ಯದರ್ಶಿ (ಅಭಿಪ್ರಾಯ–1) ಹಾಗೂ ವಿಚಾರಣಾಧಿಕಾರಿಗಳು, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಇವರು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವರದಿಯ ಉದ್ಧೃತ ಭಾಗ ಈ ಕೆಳಕಂಡಂತೆ ಇರುತ್ತದೆ:–

"11. From the reasons discussed above, I am of the opinion that the applicant has placed satisfactory evidence to establish that his date of birth is 13.03.1955 (thirteenth March, nineteen hundred fifty five) and not 01.07.1954 and the competent authority may effect alternation of the date of birth of the applicant Shri Abdul Khadeer, in his Service Book, as prayed by him."

4. ಸದರಿ ವಿಚಾರಣಾ ವರದಿಯನ್ವಯ ಅಗತ್ಯ ಕ್ರಮ ವಹಿಸುವ ಪೂರ್ವದಲ್ಲಿ, ಅರ್ಜಿದಾರರು ಸೇವೆಗೆ ಸೇರಿದ ಪ್ರಾರಂಭದಲ್ಲಿ ತಮ್ಮ ಜನ್ಮ ದಿನಾಂಕ ತಿದ್ದುಪಡಿಗೆ ಕೋರಿ ಸಲ್ಲಿಸಿದ್ದಾರೆಂದು ಹೇಳಲಾದ ದಿನಾಂಕ: 07–10–1977 ರ ಮನವಿಯ ಪ್ರತಿಯನ್ನು ಈ ಹಂತದಲ್ಲಿ ಸಾಕ್ಷ್ಯಾಧಾರವಾಗಿ ಪರಿಗಣಿಸಲು ಕಾನೂನಿನಲ್ಲಿ ಅವಕಾಶವಿದೆಯೇ ಎಂಬ ಬಗ್ಗೆ ಕಾನೂನು ಇಲಾಖೆಯ ಅಭಿಪ್ರಾಯವನ್ನು ಕೋರಲಾಗಿ, ಈ ಬಗ್ಗೆ ಕಾನೂನು ಇಲಾಖೆಯು ಭಾರತೀಯ ಸಾಕ್ಷ್ಯ ಅಧಿನಿಯಮ 1872 ರ ವಿಭಿನ್ನ ಪ್ರವಧಾನಗಳ ಅಡಿಯಲ್ಲಿ ಸದರಿ ಮನವಿಯ ಪ್ರತಿಯನ್ನು ಸಾಕ್ಷ್ಯಾಧಾರವಾಗಿ ಪರಿಗಣಿಸಲು ಅವಕಾಶವಿದೆ ಎಂದು ಅಭಿಪ್ರಾಯಿಸಿರುತ್ತದೆ.

5. ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ಸದರಿ ಪ್ರಕರಣದಲ್ಲಿ ವಿಚಾರಣಾಧಿಕಾರಿಯವರ ವರದಿ ಹಾಗೂ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅಭಿಪ್ರಾಯದಂತೆ, ಶ್ರೀ ಅಬ್ದುಲ್ ಖದೀರ್, ಇವರ ಸೇವಾ ದಾಖಲೆಗಳಲ್ಲಿ ಅವರ ಜನ್ಮ ದಿನಾಂಕವನ್ನು 01–07–1954ರ ಬದಲು 13–03–1955 ಎಂದು ತಿದ್ದುಪಡಿಗೊಳಿಸಲು ತೀರ್ಮಾನಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 72 ಸಅಸೇ 2013, ಬೆಂಗಳೂರು, ದಿನಾಂಕ: 26ನೇ ಜೂನ್ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಅಬ್ದುಲ್ ಖದೀರ್, ಪ್ರಸ್ತುತ ಸರ್ಕಾರದ ಅಪರ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಇ–ಆಡಳಿತ), ಕರ್ನಾಟಕ ಸರ್ಕಾರದ ಸಚಿವಾಲಯ, ಇವರ ಜನ್ಮ ದಿನಾಂಕ: 01–07–1954 ಎಂಬುದರ ಬದಲಾಗಿ ದಿನಾಂಕ: 13–03–1955 (ಹದಿಮೂರನೇ ಮಾರ್ಚ್ ಸಾವಿರದ ಒಂಬೈನೂರ ಐವತ್ತೈದು) ಎಂದು ತಿದ್ದುಪಡಿ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6).

**PR.544**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ** : ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 205 ಸಅಸೇ 2009, ದಿನಾಂಕ:20–04–2009.
2. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 14 ಸಅಸೇ 2012, ದಿನಾಂಕ:20.03.2012.
3. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 94 ಸಅಸೇ 2013, ದಿನಾಂಕ:17.04.2013.
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಸತಿ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ:ವಇ 22ಸ್ವೀಮರ 2008, ದಿನಾಂಕ: 03.02.2014.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯಲ್ಲಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ತಾತ್ಕಾಲಿಕವಾಗಿ ದಿನಾಂಕ:01–04–2013ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿತ್ತು. ಮೇಲೆ ಓದಲಾದ ಕ್ರಮಸಂಖ್ಯೆ (4)ರ ಅನಧಿಕೃತ ಟಿಪ್ಪಣಿಯಲ್ಲಿ ಸಚಿವಾಲಯದ ವಸತಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿಯೊಂದಿಗೆ ಮುಂದುವರಿಸುವಂತೆ ಕೋರಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ | 01 |
| 2 | ಶೀಘ್ರಲಿಪಿಗಾರರು/ಹಿರಿಯಶೀಘ್ರಲಿಪಿಗಾರರು/ಪತ್ರಾಂಕಿತ ಆಪ್ತ ಸಹಾಯಕರು | 02 |
| 3 | ಕಿರಿಯ ಸಹಾಯಕ/ಸಹಾಯಕ | 01 |
| 4 | ವಾಹನ ಚಾಲಕರು | 01 |
| 5 | ದಲಾಯತ್ | 02 |
| | **ಒಟ್ಟು** | **07 ಹುದ್ದೆಗಳು** |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 162 ಸಉಸೇ 2014 ಬೆಂಗಳೂರು ದಿನಾಂಕ: 11ನೇ ಜೂನ್2014**

ಕರ್ನಾಟಕ ಸರ್ಕಾರ ಸಚಿವಾಲಯದ ವಸತಿ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿಯ ಹುದ್ದೆಗಳೊಂದಿಗೆ ದಿನಾಂಕ: 01–04–2014 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಆಪ್ತ ಕಾರ್ಯದರ್ಶಿ(ಆಪ್ತ ಕಾರ್ಯದರ್ಶಿ ಗ್ರೇಡ್–2) | 01 |
| 2 | ಶೀಘ್ರಲಿಪಿಗಾರರು/ಹಿರಿಯಶೀಘ್ರಲಿಪಿಗಾರರು/ಪತ್ರಾಂಕಿತ ಆಪ್ತ ಸಹಾಯಕರು | 02 |
| 3 | ಕಿರಿಯ ಸಹಾಯಕ/ಸಹಾಯಕ | 01 |
| 4 | ವಾಹನ ಚಾಲಕರು | 01 |
| 5 | ದಲಾಯತ್ | 02 |
| | ಒಟ್ಟು | **07 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಾ॥ ಗೀತಾ ಎಲ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**PR. 545**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿನ ಉಪ ಕಾರ್ಯದರ್ಶಿ (ಕಾರ್ಯಕಾರಿ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಯೊಂದಿಗೆ ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 95; ದಿನಾಂಕ: 18–12–1995. ಹಾಗೂ ತಿದ್ದೋಲೆ ದಿನಾಂಕ: 20–12–1995.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 235 ಸಅಸೇ 2012; ದಿನಾಂಕ:11–06–2012.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 249 ಸಅಸೇ 2013, ದಿನಾಂಕ:17–04–2013.
4. ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 35 ಡಿಇವಿ 2014; ದಿನಾಂಕ:13–03–2014.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶ ಮತ್ತು ತಿದ್ದೋಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಕಾರ್ಯಕಾರಿ ವಿಭಾಗದಲ್ಲಿ ಉಪ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 1 |
| 2 | ಕಿರಿಯ ಸಹಾಯಕರು | 1 |
| 3 | ದಲಾಯತ್ | 1 |

ಮೇಲೆ ಕ್ರಮ ಸಂಖ್ಯೆ (2) ಹಾಗೂ (3) ರಲ್ಲಿ ಓದಲಾದ ಆದೇಶಗಳಲ್ಲಿ ಮೇಲ್ಕಂಡ ತಾತ್ಕಾಲಿಕ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸುತ್ತಾ ಬರಲಾಗಿದ್ದು, ಪ್ರಸ್ತುತ ಸದರಿ ಹುದ್ದೆಗಳನ್ನು ಮುಂದುವರಿಸುವ ಅಗತ್ಯವಿರುವುದರಿಂದ ದಿನಾಂಕ:01–04–2014 ರಿಂದ ಖಾಯಂ ಆಗಿ ಮುಂದುವರಿಸುವಂತೆ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ (ಕಾರ್ಯಕಾರಿ), ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರು ಕೋರಿದ್ದಾರೆ. ಅದರಂತೆ ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 178 ಸಅಸೇ 2014 ಬೆಂಗಳೂರು ದಿನಾಂಕ: 19ನೇ ಜೂನ್ 2014**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿನ ಉಪ ಕಾರ್ಯದರ್ಶಿ(ಕಾರ್ಯಕಾರಿ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಡನೆ ದಿನಾಂಕ:01–04–2014 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 1 |
| 2 | ಕಿರಿಯ ಸಹಾಯಕರು | 1 |
| 3 | ದಲಾಯತ್ | 1 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10-07-1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. 546

**ಚಂದ್ರಶೇಖರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ** : ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಅಧೀನದಲ್ಲಿ ಭೂಮಿ ಮತ್ತು ಯು.ಪಿ.ಓ.ಆರ್ ವಿಭಾಗದ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 97 ಎಂಆರ್‌ಆರ್ 2011, ದಿನಾಂಕ:13.09.2011.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 482 ಸಅಸೇ 2011, ದಿನಾಂಕ:13-10-2011.
3. ಸರ್ಕಾರದ ಕಾರ್ಯದರ್ಶಿಯವರ ಅ.ಸ.ಪ.ಸಂಖ್ಯೆ:ಕಂಇ101ಎಂಆರ್‌ಆರ್ 2013, ದಿನಾಂಕ:19.12.2013

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಕಂದಾಯ ಇಲಾಖೆಯ ಅಧೀನದಲ್ಲಿ ಭೂಮಿ ಮತ್ತು ಅರ್ಬನ್ ಪ್ರಾಪರ್ಟಿ ಓನರ್‌ಶಿಪ್ ರೆಕಾರ್ಡ್ಸ್ ಎಂಬ ಹೊಸ ಶಾಖೆ/ಹುದ್ದೆಗಳನ್ನು ಸೃಜಿಸಲಾಗಿದೆ. ಮತ್ತು ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಅಧೀನದಲ್ಲಿ ಭೂಮಿ ಮತ್ತು ಯು.ಪಿ.ಓ.ಆರ್ ವಿಭಾಗದ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಿ ದಿನಾಂಕ:13.10.2011ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಅನಧಿಕೃತ ಟಿಪ್ಪಣಿಯಲ್ಲಿ ಸಚಿವಾಲಯದ ಕಂದಾಯ ಇಲಾಖೆಯ ಅಧೀನದಲ್ಲಿ ಭೂಮಿ ಮತ್ತು ಯು.ಪಿ.ಓ.ಆರ್ ವಿಭಾಗದ ಹುದ್ದೆಗಳನ್ನು ಇನ್ನು ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ. ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ:ಆಇ 641 ವೆಚ್ಚ-7/2013, ದಿನಾಂಕ:08.11.2013ರಲ್ಲಿ ಭೂಮಿ ಮತ್ತು ಯು.ಪಿ.ಓ.ಆರ್ ವಿಭಾಗದಲ್ಲಿ ಈಗಾಗಲೇ ಎರಡು ವರ್ಷಗಳ ಮಟ್ಟಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಹುದ್ದೆಗಳನ್ನು ಇನ್ನು ಒಂದು ವರ್ಷದ ಅವಧಿಗೆ ಮುಂದುವರೆಸಲು ಒಪ್ಪಿಗೆ ನೀಡಿರುತ್ತದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸರ್ಕಾರದ ಅಪರ/ಜಂಟಿ/ಉಪಕಾರ್ಯದರ್ಶಿ ಹಾಗೂ ಪದನಿಮಿತ್ತ ನಿರ್ದೇಶಕರು (ಭೂಮಿ ಮತ್ತು ಯು.ಪಿ.ಓ.ಆರ್) | 01 |
| 2 | ಸರ್ಕಾರದ ಅಧೀನ ಕಾರ್ಯದರ್ಶಿ | 01 |
| 3 | ಶಾಖಾಧಿಕಾರಿ | 01 |
| 4 | ಹಿರಿಯ ಸಹಾಯಕ | 01 |
| 5 | ಸಹಾಯಕರು | 02 |
| 6 | ಕಿರಿಯ ಸಹಾಯಕ | 01 |
| 7 | ಶೀಘ್ರಲಿಪಿಗಾರರು | 02 |
| 8 | ಬೆರಳಚ್ಚುಗಾರರು | 01 |
| 9 | ಗ್ರೂಪ್-ಡಿ | 02 |
| **ಒಟ್ಟು** | | **12 ಹುದ್ದೆಗಳು** |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 164 ಸಲುಸೇ 2014 ಬೆಂಗಳೂರು ದಿನಾಂಕ: 13ನೇ ಜೂನ್ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಅಧೀನದಲ್ಲಿ ಭೂಮಿ ಮತ್ತು ಯು.ಪಿ.ಓ.ಆರ್ ವಿಭಾಗದ ಹುದ್ದೆಗಳನ್ನು ದಿನಾಂಕ:13.10.2013 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸರ್ಕಾರದ ಅಪರ/ಜಂಟಿ/ಉಪಕಾರ್ಯದರ್ಶಿ ಹಾಗೂ ಪದನಿಮಿತ್ತ ನಿರ್ದೇಶಕರು (ಭೂಮಿ ಮತ್ತು ಯು.ಪಿ.ಓ.ಆರ್) | 01 |
| 2 | ಸರ್ಕಾರದ ಅಧೀನ ಕಾರ್ಯದರ್ಶಿ | 01 |
| 3 | ಶಾಖಾಧಿಕಾರಿ | 01 |
| 4 | ಹಿರಿಯ ಸಹಾಯಕ | 01 |
| 5 | ಸಹಾಯಕರು | 02 |

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 6 | ಕಿರಿಯ ಸಹಾಯಕ | 01 |
| 7 | ಶೀಘ್ರಲಿಪಿಗಾರರು | 02 |
| 8 | ಬೆರಳಚ್ಚುಗಾರರು | 01 |
| 9 | ಗ್ರೂಪ್–ಡಿ | 02 |
| ಒಟ್ಟು | | **12 ಹುದ್ದೆಗಳು** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 641 ವೆಚ್ಚ–7/2013, ದಿನಾಂಕ:08.11.2013ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 547**

**ಡಾ॥ ಗೀತಾ ಎಲ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬನಶಂಕರಿ 6ನೇ ಹಂತ, 10ನೇ ಬ್ಲಾಕ್‌ನಿಂದ ಮೈಸೂರು ರಸ್ತೆಗೆ 100 ಅಡಿ ಸಂಪರ್ಕ ರಸ್ತೆ ನಿರ್ಮಾಣ ಸಂಬಂಧ ಭೂ ಸ್ವಾಧೀನ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡಲು ಮತ್ತು ಅಂತಿಮ ಅಧಿಸೂಚನೆ ಹೊರಡಿಸಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ:

ಬೆಂಅಪ್ರಾ/ವಿಭೂಸ್ವಾಅ/ಎ4/ ಪಿಆರ್/84 /2011–12,ದಿನಾಂಕ: 04–06–2011,

ಬೆಂಅಪ್ರಾ/ವಿಭೂಸ್ವಾಅ/ಎ5/ ಪಿಆರ್/22//2011–12 ದಿನಾಂಕ: 18–8–2011,

ಬೆಂಅಪ್ರಾ/ವಿಭೂಸ್ವಾಅ/ಎ5/ಪಿಆರ್/84/2012–13,ದಿನಾಂಕ: 25–9–2012,

ಬೆಂಅಪ್ರಾ/ ವಿಭೂಸ್ವಾಅ/ ಎ5/ ಪಿಆರ್/23/ 13–14, ದಿನಾಂಕ: 20–6–2013,

ಬೆಂಅಪ್ರಾ/ ವಿಭೂಸ್ವಾಅ/ ಎ5/ ಪಿಆರ್/23/13–14, ದಿನಾಂಕ: 7–9–2013

ಮತ್ತು ಬೆಂಅಪ್ರಾ/ ವಿಭೂಸ್ವಾಅ/ ಎ5/ ಪಿಆರ್/23/13–14, ದಿನಾಂಕ: 01–01–2014.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಇವರು ಬನಶಂಕರಿ 6ನೇ ಹಂತ, 10ನೇ ಬ್ಲಾಕ್‌ನಿಂದ ಮೈಸೂರು ರಸ್ತೆಗೆ 100 ಅಡಿ ಸಂಪರ್ಕ ರಸ್ತೆ ನಿರ್ಮಿಸುವ ಸಂಬಂಧ ಸದರಿ ಯೋಜನೆಗೆ ಒಳಪಡುವ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಚೂಡೇನಪುರ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳ ಒಟ್ಟು 16 ಎಕರೆ 36 ಗುಂಟೆ ಹಾಗೂ ಕೆಂಗೇರಿ ಗ್ರಾಮದ ಒಟ್ಟು 5 ಎಕರೆ 21 ಗುಂಟೆ ಒಟ್ಟಾರೆ 22 ಎಕರೆ 17 ಗುಂಟೆ ಜಮೀನನ್ನು ಗುರ್ತಿಸಲಾಗಿದ್ದು, ಪ್ರಾಧಿಕಾರದ ಸಭೆಯ ವಿಷಯ ಸಂಖ್ಯೆ: 60/06 ದಿನಾಂಕ: 24–3–2006 ರ ತೀರ್ಮಾನದಂತೆ ಪ್ರಾರಂಭಿಕ ಅಧಿಸೂಚನೆಯನ್ನು ದಿನಾಂಕ: 18.05.2006ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿರುತ್ತದೆ ಎಂದು ವರದಿ ಮಾಡಿರುತ್ತಾರೆ.

ಮೇಲೆ ಓದಲಾದ ದಿನಾಂಕ:01–01–2014ರ ಪ್ರಾಧಿಕಾರದ ಆಯುಕ್ತರ ಪತ್ರದಲ್ಲಿ ಪ್ರಾಧಿಕಾರದ ಅಭಿಯಂತರರು ದಿನಾಂಕ: 28–10–2006 ರಂದು ವರದಿ ನೀಡಿ, ಸದರಿ ರಸ್ತೆಯು ಮೈಸೂರು ರಸ್ತೆಗೆ ಕೂಡುವ ಜಂಕ್ಷನ್‌ನಲ್ಲಿ ಫ್ಲೈಓವರ್ ನಿರ್ಮಾಣವಾಗಿರುವುದರಿಂದ ಅಭಿಯಂತರರು ಟೋಟಲ್ ಸ್ಟೇಷನ್ ಸರ್ವೆ ಮಾಡಿಸಿ, ನಕ್ಷೆಯಲ್ಲಿ ಗುರುತಿಸಿ , ಅಂತಿಮ ಅಧಿಸೂಚನೆಗೆ ಒಳಪಡುವ 20 ಎಕರೆ 30 ಗುಂಟೆ ಜಮೀನುಗಳ ವಿಸ್ತೀರ್ಣವನ್ನು ಮತ್ತು ಅಲೈನ್‌ಮೆಂಟ್ ಬದಲಾವಣೆಯಾಗಿರುವ 1 ಎಕರೆ 04 ಗುಂಟೆ ಜಮೀನುಗಳಿಗೆ ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸುವ ಸರ್ವೆ ನಂಬರ್‌ಗಳ ವಿಸ್ತೀರ್ಣದ ವಿವರವನ್ನು ಮತ್ತು ಈ ಯೋಜನೆಗೆ ತಗಲುವ ವೆಚ್ಚದ ಪಟ್ಟಿಯ ರೂ. 1920.00 ಲಕ್ಷಗಳಿಗೆ ಅಂದಾಜು ಪಟ್ಟಿಯನ್ನು ನೀಡಿರುತ್ತಾರೆ.

ಪ್ರಾಧಿಕಾರದ ಸಭೆಯ ವಿಷಯ ಸಂಖ್ಯೆ: 140/11ರ ದಿನಾಂಕ: 28–4–2011 ರ ತೀರ್ಮಾನದಂತೆ, ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೆಂಗೇರಿ ಮತ್ತು ಚೂಡೇನಪುರ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿನ 20 ಎಕರೆ 30 ಗುಂಟೆ ಜಮೀನಿಗೆ ಸಂಬಂಧಿಸಿದಂತೆ, ಬೆಂಗಳೂರು ಅಭಿವೃದ್ಧಿ ಕಾಯ್ದೆ 19(1) ರಂತೆ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರವನ್ನು ಕೋರಲು ನಿರ್ಣಯಿಸಲಾಯಿತೆಂದು ಹಾಗೂ ಬೆಂಗಳೂರು ದಕ್ಷಿಣ ತಾಲ್ಲೂಕು ಕೆಂಗೇರಿ ಹೋಬಳಿ, ಕೆಂಗೇರಿ ಮತ್ತು ಚೂಡೇನಪುರ ಗ್ರಾಮಗಳಲ್ಲಿನ 01 ಎಕರೆ 04 ಗುಂಟೆ ಜಮೀನಿಗೆ ಸಂಬಂಧಿಸಿದಂತೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾಯ್ದೆ 17(1) ಮತ್ತು (3) ರಂತೆ ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಲು ತೀರ್ಮಾನಿಸಿ, ಅದರಂತೆ, ದಿನಾಂಕ: 5–1–2012 ರಂದು ಪ್ರಾರಂಭಿಕ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಚುರ ಪಡಿಸಲಾಗಿರುತ್ತದೆ ಎಂದು ವರದಿ ಮಾಡಿರುತ್ತಾರೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಮುಂದುವರೆದು, ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಚೂಡೇನಪುರ ಮತ್ತು ಕೆಂಗೇರಿ ಗ್ರಾಮಗಳಲ್ಲಿನ 20 ಎಕರೆ 30 ಗುಂಟೆ ಜಮೀನಿಗೆ ಅಂತಿಮ ಅಧಿಸೂಚನೆಯನ್ನು ಹೊರಡಿಸ ಬೇಕಾಗಿರುತ್ತದೆ. ದಿನಾಂಕ: 20–4–2011 ರಂದು ಪ್ರಾಥಮಿಕ ಅಧಿಸೂಚನೆ ಹೊರಡಿಸಿರುವ 1 ಎಕರೆ 04 ಗುಂಟೆ ಜಮೀನಿಗೆ ಭೂ ಸ್ವಾಧೀನ ಕಾಯ್ದೆ ನಡವಳಿಯಲ್ಲಿರುವುದರಿಂದ ನಂತರ ಅಂತಿಮ ಅಧಿಸೂಚನೆ ಹೊರಡಿಸಬೇಕಾಗಿರುತ್ತದೆ ಎಂದು ತಿಳಿಸುತ್ತಾ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾಯ್ದೆ ಕಲಂ 1976 ರ ಕಲಂ 15 ರನ್ವಯ ಸರ್ಕಾರದ ಅನುಮತಿ ನೀಡಲು ಹಾಗೂ ಭೂ ಸ್ವಾಧೀನ ಕಾಯ್ದೆ ಕಲಂ 19(1) ರಂತೆ ಅಧಿಸೂಚನೆಯನ್ನು ಹೊರಡಿಸಲು ಕೋರಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 205 ಬೆಂಆಸೇ 2011, ಬೆಂಗಳೂರು, ದಿನಾಂಕ: 30–07–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಬನಶಂಕರಿ 6ನೇ ಹಂತ, 10ನೇ ಬ್ಲಾಕ್‌ನಿಂದ ಮೈಸೂರು ರಸ್ತೆಗೆ 100 ಅಡಿ ಸಂಪರ್ಕ ರಸ್ತೆ ನಿರ್ಮಿಸುವ ಸಂಬಂಧ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೆಂಗೇರಿ ಮತ್ತು ಚೂಡೇನಪುರ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿನ 20 ಎಕರೆ 30 ಗುಂಟೆ ಜಮೀನಿಗೆ ದಿನಾಂಕ: 18–5–2006ರಂದು ಹೊರಡಿಸಿರುವ ಪ್ರಾಥಮಿಕ ಅಧಿಸೂಚನೆಗೆ ಹಾಗೂ 20–4–2011 ರಂದು 01 ಎಕರೆ 04 ಗುಂಟೆಗೆ ಪ್ರಾಧಿಕಾರ ಹೊರಡಿಸಿರುವ ಪ್ರಾಥಮಿಕ ಅಧಿಸೂಚನೆಗೆ ಬೆಂಗಳೂರು ಅಭಿವೃದ್ಧಿ ಕಾಯ್ದೆ ಕಲಂ 15ರನ್ವಯ ಘಟನೋತ್ತರ ಮಂಜೂರಾತಿ ನೀಡಿದೆ. ಹಾಗೂ ಸದರಿ ಕಾಯ್ದೆ ಕಲಂ 18(3) ರನ್ವಯ ಈ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಿದೆ. 20 ಎಕರೆ 30 ಗುಂಟೆ ಜಮೀನಿಗೆ ಬಿಡಿಎ ಕಾಯ್ದೆ ಕಲಂ 19(1) ರನ್ವಯ ಅಂತಿಮ ಅಧಿಸೂಚನೆ ಹೊರಡಿಸಲು ಸಹಾ ಆದೇಶಿಸಿದೆ.

ಸದರಿ ಯೋಜನೆಗೆ ತಗಲುವ ಅಂದಾಜು ರೂ. 1920.00 ಲಕ್ಷ (ಒಂದು ಸಾವಿರದ ಒಂಭೈನೂರ ಇಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಗಳ ವೆಚ್ಚವನ್ನು ಪ್ರಾಧಿಕಾರದ ಸಂಪನ್ಮೂಲಗಳಿಂದಲೇ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿ.ಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

**PR. 608**
**SC.700**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆಕುಕ 332 ಸಿಜಿಇ 2012, ಬೆಂಗಳೂರು, ದಿನಾಂಕ: 02–08–2014.**

ಸರ್ಕಾರದ ಆದೇಶ ಸಂಖ್ಯೆ: ಆಕುಕ 332 ಸಿಜಿಇ 2012, ದಿನಾಂಕ: 20–03–2013ರಲ್ಲಿ ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಕಾಯ್ದೆ 2006ರಲ್ಲಿ ಸೃಜಿಸಲಾದ ಹುದ್ದೆಗಳಿಗೆ ನೇಮಕಾತಿ ಕಾರ್ಯ ವಿಧಾನದ ಅನುಬಂಧದಲ್ಲಿನ ಕ್ರಮ ಸಂಖ್ಯೆ 11 ಮತ್ತು 13ರಲ್ಲಿ ನಮೂದಿಸಲಾದ "Senior **food safety officer grade II** ಹಾಗೂ **Junior food Safety officer grade II"** ಎಂಬ ಪದಗಳ ಬದಲಾಗಿ **"Senior food safety officer"** ಮತ್ತು **"Food safety officer"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಎಸ್. ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಆರೋಗ್ಯ 1& 2)

**PR. 585**
**SC.250**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59